
ನಮ್ಮ ಮಾನಸ
ಸಂಪುಟ: 3 ಏಪ್ರಿಲ್ 2010 ಸಂಚಿಕೆ : 12
ಬಾಲ್ಯದ ಕನಸುಗಳಿಗೆ ರೆಕ್ಕೆಪುಕ್ಕ ಹಚ್ಚಿ
ಶಾಲೆಯಂಗಳದಲ್ಲಿ ಎಲ್ಲರೊಡಗೂಡಿ
ಕಲಿಯೋಣ ಬಾರಾ, ಕಲಿಯೋಣ ಬಾ

# ಹೊನ್ನಿನ ಹಂದರದಲ್ಲಿ ಸುಂದರ ಕರ್ನಾಟಕ

ಕರುನಾಡ ಸಿರಿನುಡಿ - ಕನ್ನಡ
ಕಸ್ತೂರಿ ಪರಿಮಳದ ಕುಡಿ - ಕನ್ನಡ ನುಡಿ
ಹಾಲ್ಜೇಜಿನ ಮಧುರ ಝರಿ - ಕನ್ನಡ ನಾಣ್ನುಡಿ

ಸುಮಾರು 2000 ವರ್ಷಗಳ ಇತಿಹಾಸವಿರುವ
ಕನ್ನಡಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ.
ಇಂದು ಕೂಡ ಕರ್ನಾಟಕ ಸಮಗ್ರ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ಆಟೋಮೊಬೈಲ್ ಉದ್ಯಮ, ಸಿದ್ಧ ಉಡುಪು, ಆಭರಣಗಳು, ಕ್ರೀಡೆ,
ಪುಷ್ಪೋದ್ಯಮದಂತಹ ಪ್ರಮುಖ ಕ್ಷೇತ್ರಗಳಲ್ಲಿ
ಸಾಧಿಸಿದ ಪ್ರಗತಿಯೂ ಶ್ಲಾಘನೀಯ.
ಕರ್ನಾಟಕ ಭಾರತಕ್ಕಷ್ಟೇ ಮಾತ್ರವಲ್ಲ
ಇಡೀ ವಿಶ್ವಕ್ಕೆ ಮಾದರಿ.

**ಅಪಾರ ಕೀರ್ತಿ ಗಳಿಸಿ ಮೆರೆವ ಭವ್ಯನಾಡಿಗೆ....**

**ಇಂದು ಸುವರ್ಣ ಸಂಭ್ರಮ.**


ಕರ್ನಾಟಕ ವಾರ್ತೆ

# ನಮ್ಮ ಮಾನಸ

**ಏಪ್ರಿಲ್ 2010**

ಸಂಪುಟ : 3 ಸಂಚಿಕೆ : 12

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ*

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**




ಸಂಪಾದಕೀಯ

# ಮಹಿಳಾ ಮೀಸಲಾತಿ; ಮತ್ತೊಂದು ಪ್ರತ್ಯೇಕಿಸುವ ತಂತ್ರವೇ?

2010ರಂದು ಲೋಕಸಭೆ, ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡುವ ಮಸೂದೆ ಅಂಗೀಕಾರಗೊಂಡ ಹಿನ್ನೆಲೆಯಲ್ಲಿಯೇ ಮಸೂದೆಯ ಪರ, ವಿರೋಧ, ಚರ್ಚೆಗಳು, ವಿರೋಧಾಭಾಸಗಳು, ವಿವಾದಗಳು ಹುಟ್ಟಿಕೊಳ್ಳತೊಡಗಿವೆ. 14 ವರ್ಷಗಳಲ್ಲಿ ಸಂಸತ್ತಿನಲ್ಲಿ ಮೂರು ಬಾರಿ ಮಹಿಳಾ ಮೀಸಲಾತಿ, ಮಸೂದೆಯಾಗಿ ಅಂಗೀಕಾರವಾಗುವಲ್ಲಿ ವಿಫಲಗೊಂಡಿತ್ತು. ಈ ಮಸೂದೆಯಿಂದಾಗಿ ಲೋಕಸಭೆಯಲ್ಲಿ ಹಾಗೂ ಚುನಾಯಿತ ವಿಧಾನ ಸಭೆಗಳಲ್ಲಿ ಮಹಿಳೆಯರ ಸಂಖ್ಯೆ ಅಧಿಕವಾಗುತ್ತದೆ. ಹಾಗಾಗಿ ರಾಜಕಾರಣದ ದಿಕ್ಕು ಹೊಸ ಸ್ವರೂಪ ಪಡೆಯಬಹುದೆಂಬ ಎಣಿಕೆಗಳಿವೆ.

ಈಗಿರುವ ರೀತಿಯಲ್ಲಿಯೇ ಮಹಿಳಾ ಮೀಸಲಾತಿ ಮಸೂದೆ ಅಂಗೀಕಾರವಾದಲ್ಲಿ ಸ್ವಾಯತ್ತ ಮಹಿಳಾಚಳವಳಿ ಸಮನ್ವಯಗೊಳಿಸಲಿಚ್ಛಿಸುವ ಲಿಂಗಸಮಾನತೆ, ಜಾತಿಸಮಾನತೆಯ ಹೋರಾಟಕ್ಕೆ ಒಂದು ನ್ಯಾಯಯುತ ಇತಿಹಾಸ ಬರೆಯಲು ಸಾಧ್ಯವೇ ಎಂಬ ಪ್ರಶ್ನೆ ಆತಂಕಕ್ಕೆ ಎಡೆ ಮಾಡುತ್ತಿದೆ. ಈಗಿನ ಜಾಗತೀಕರಣದ ಸಂದರ್ಭದಲ್ಲಿ ಮಹಿಳಾ ನ್ಯಾಯದ ಕಲ್ಪನೆಯ ಜೊತೆಗೆ ಜಾತಿ ನ್ಯಾಯದ ಕಲ್ಪನೆಯೂ ಕೂಡ ಹೇಳ ಹೆಸರಿಲ್ಲದಂತೆ ನಾಶವಾಗಿ ಹಣ, ಸ್ಪರ್ಧೆ, ಪ್ರತಿಭೆ ಇಂತಹ ಅಂಶಗಳೇ ಬಹುಮುಖ್ಯವಾದ ಪಾತ್ರ ವಹಿಸಿ ವ್ಯಕ್ತಿಗತ ಸಾಧನೆಗಳು ಮುಖ್ಯವಾಗ ತೊಡಗಿವೆ. ಸಂಘಟಿತ ಕಲ್ಪನೆ, ಮೌಲ್ಯಗಳಿಗೆ ಬೆಲೆಯೇ ಇಲ್ಲದಂತಾಗಿದೆ. ಈ ಸಂದರ್ಭದಲ್ಲಿ ಮಹಿಳಾಮೀಸಲಾತಿಯೊಂದಿಗೆ ಒಳಮೀಸಲಾತಿಯನ್ನು ಜಾರಿಗೆ ತಂದರೆ ಬಹುತೇಕ ರಾಜಕಾರಣ ಈಗಿರುವ ಪಂಚಾಯಿತ ರಾಜಕಾರಣದ ರೀತಿ ಹೆಂಗಸರ ಹೆಸರಲ್ಲಿ ಪುರುಷರು ನಡೆಸುವ ರಾಜಕೀಯ ಸ್ವರೂಪ ಪಡೆಯುತ್ತದೆ ಎನ್ನಲಾಗುತ್ತಿದೆ. ಮೇಲ್ವರ್ಗದ ಕುಟುಂಬದ ಮಹಿಳೆಯರೂ ಪುರುಷ ಪ್ರಧಾನ, ಜಾತಿ, ವರ್ಗದ ಮೌಲ್ಯಗಳ ಹಿನ್ನೆಲೆಯಲ್ಲಿ ತಮ್ಮ ಸುತ್ತ ಒಂದು ಕೋಟೆ ನಿರ್ಮಿಸಿಕೊಳ್ಳುವುದರಲ್ಲಿ ಸಂಶಯವೇ ಇಲ್ಲ. ಈ ಮಹಿಳಾ ಮೀಸಲಾತಿ ಮಸೂದೆ ಒಳಮೀಸಲಾತಿ ಇಲ್ಲದೇ ಜಾರಿಗೊಂಡಲ್ಲಿ ಈ ದೇಶದ ಪ್ರಜಾಪ್ರಭುತ್ವದಲ್ಲಿ ಮೇಲ್ವರ್ಗ, ಮೇಲು ಜಾತಿಯ ಪುರುಷ ರಾಜಕಾರಣಿಗಳು ಕಾಣಸಿಗುವ ಜಾಗದಲ್ಲಿ ಮೇಲ್ವರ್ಗದ, ಮೇಲುಜಾತಿಯ ಮಹಿಳಾ ರಾಜಕಾರಣಿಗಳು ಕಾಣಸಿಗುತ್ತಾರೆ. ರಾಜಕಾರಣದಲ್ಲಿಯೂ ಕುಟುಂಬದ ಗಂಡಸರು ಮಹಿಳೆಯರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ತಮ್ಮ ಪುರುಷ ಪ್ರಧಾನ ರಾಜಕಾರಣವನ್ನೇ ಮುಂದುವರಿಸುತ್ತಾರೆ.

ರಾಜಕಾರಣದಲ್ಲಿ ಹೊಸ ಭಾಷ್ಯ ಬರೆಯುವ ದಿಕ್ಕಿನತ್ತ ಚಳವಳಿಯನ್ನು ರೂಪಿಸುವಂತಹ ತಾತ್ತ್ವಿಕ ನಿಲುವು ಹೊಂದಿರುವ ಸ್ವಾಯತ್ತ ಮಹಿಳಾಚಳವಳಿ ಒಳ ಮೀಸಲಾತಿಯನ್ನು ಒಳಗೊಂಡ ಮಹಿಳಾಮೀಸಲಾತಿ ಮಾತ್ರ ಈ ದೇಶದ ಲಿಂಗ, ಜಾತಿ, ವರ್ಗ ಹೋರಾಟದ ಸಮನ್ವಯತೆಯನ್ನು ಕಾಯ್ದುಕೊಳ್ಳಲು ಸಾಧ್ಯವೆಂದು ನಂಬುತ್ತದೆ. ಒಳಮೀಸಲಾತಿಯನ್ನು ಬಳಸಿಕೊಂಡು ಒಟ್ಟಾರೆಯಾಗಿ ಮೀಸಲಾತಿಯನ್ನು ನಿಲ್ಲಿಸಲು ಪ್ರಯತ್ನಿಸುವಂತಹ ಪಕ್ಷಗಳು, ವ್ಯಕ್ತಿಗಳು ಮಹಿಳಾ ವಿರೋಧಿ ಧೋರಣೆ ತಳೆದವರಾದುದರಿಂದ ಅಂತಹವರನ್ನು ಮಹಿಳಾಚಳವಳಿ ನಿರ್ಲಕ್ಷಿಸಬೇಕಾಗಿದೆ. ಹಾಗೂ ಜಾತಿ, ವರ್ಗ, ಲಿಂಗ ಅಸಮಾನತೆ ಕುರಿತು ಹೋರಾಟ ಮಾಡಿಕೊಂಡು ಬರುತ್ತಿರುವ ಪ್ರತಿಯೊಂದು ಮಹಿಳಾ ಗುಂಪೂ ಸಹ ಈ ಸಂದರ್ಭದಲ್ಲಿ ಒಳಮೀಸಲಾತಿಯನ್ನು ಒತ್ತಾಯಿಸಿ, ಈಗಿರುವ ಮಸೂದೆ ಒಳಮೀಸಲಾತಿ ಹೊಂದಿಯೇ ಅಂಗೀಕಾರವಾಗಬೇಕೆಂದು ಒತ್ತಾಯಿಸುವ ಗುರುತರವಾದ ಜವಾಬ್ದಾರಿಯನ್ನು ಹೊಂದಿವೆ.

ಸದ್ಯಕ್ಕೆ ಮೀಸಲಾತಿ ಬರಲಿ, ನಂತರ ಒಳಮೀಸಲಾತಿಯ ಬಗ್ಗೆ ಸಂಬಂಧಪಟ್ಟವರು ಹೋರಾಟ ನಡೆಸಲಿ ಎನ್ನುವುದು ಮೂರ್ಖತನದ ನಿಲುವಾಗುತ್ತದೆ. ಕಳೆದ 14 ವರುಷಗಳಿಂದಲೂ ಈ ಪ್ರಶ್ನೆಯನ್ನು ಪಕ್ಕಕ್ಕೆ ತಳ್ಳಿರುವ ಸರ್ಕಾರ, ರಾಜಕೀಯ ಪಕ್ಷಗಳು ಒಳ ಮೀಸಲಾತಿಯನ್ನು ಗಣನೆಗೆ ತೆಗೆದುಕೊಳ್ಳಲು ಇನ್ನೆಷ್ಟು ವರ್ಷ ಕಾಯಬೇಕು? ಇದು ಕಣ್ಣೊರೆಸುವ ತಂತ್ರ ಮಾತ್ರವಲ್ಲವೆ? ಒಳಮೀಸಲಾತಿ ಇಲ್ಲದೇ ನೀಡುವ ಮೀಸಲಾತಿ ಹೆಂಗಸರನ್ನು ಒಡೆಯುವ, ಪ್ರತ್ಯೇಕಿಸುವ ತಂತ್ರ. ಎಲ್ಲಾ ಮಹಿಳೆಯರನ್ನೊಳಗೊಂಡೇ ನಮ್ಮ ಹೋರಾಟದ, ಚಳವಳಿಯ ದಿಕ್ಕು, ಹಾದಿಗಳು ಸ್ಪಷ್ಟವಾಗಬೇಕಾದ ನಿಟ್ಟಿನಲ್ಲಿ ಒಳಮೀಸಲಾತಿಯನ್ನು ಒಳಗೊಂಡೇ ಮಹಿಳಾ ಮೀಸಲಾತಿ ಮಸೂದೆ ಜಾರಿಗೊಳ್ಳಬೇಕೆಂದು ನಾವು ಒತ್ತಾಯಿಸುತ್ತೇವೆ. □

ಒಳಗಿನ ಪುಟಗಳಲ್ಲಿ....



ಮುಖಪುಟ ಕೃಪೆ: ಅದ್ವೈತ ಜಿ.



# ಮಹಿಳಾ ಮೀಸಲಾತಿ ವಿಧೇಯಕ....

• ಬಿ.ಎನ್. ಶಾರದ

ಹದಿನಾಲ್ಕು ವರ್ಷಗಳವರೆಗೂ "ಕೋಲ್ಡ್ ಸ್ಟೋರೇಜ್"ನಲ್ಲಿ ಬಿದ್ದಿದ್ದ ಮಹಿಳಾ ಮೀಸಲಾತಿ ವಿಧೇಯಕವನ್ನು ಆಚೆಗೆ ತರಲಾಗಿದೆ! ಇಲ್ಲಿಯ ಟೆಂಪರೇಚರ್‌ಗೆ ಅದು ಹೊಂದಿಕೊಳ್ಳುವ ಮುನ್ನ ಅದರ ಸ್ಥಿತಿಗತಿಗಳನ್ನು ಅವಲೋಕಿಸುವ, ವಿಮರ್ಶಿಸುವ ಹಾಗೂ ಗುಣಾವಗುಣಗಳನ್ನು ಪರೀಕ್ಷೆಗೆ ಒಳಪಡಿಸುತ್ತಿರುವುದನ್ನು ನಾವೀಗ ಕಾಣುತ್ತಿದ್ದೇವೆ.

**ಏನಿದರ ಹಿನ್ನೆಲೆ :**

ಸ್ವತಂತ್ರ್ಯಪೂರ್ವ ಭಾರತದಲ್ಲಿ ಮಹಿಳೆಯರು ಮೀಸಲಾತಿಗಾಗಿ 1919–20ರಲ್ಲಿ ಮನವಿಯೊಂದನ್ನು ಲಾರ್ಡ್ ಮಾಂಟಗ್ಯೂ ಹಾಗೂ ಚಮ್ಸ್ ಫೋರ್ಡ್‌ಗೆ ಕೊಟ್ಟಿದ್ದರು. ಅದು ಬಿದ್ದು ಹೋಗಿತ್ತು ಕೂಡ.

ಸ್ವಾತಂತ್ರ್ಯದ ನಂತರ 1971–1974ರ ವರೆಗೆ ಸುದೀರ್ಘವಾಗಿ ಕಮಿಟಿಯೊಂದು ಸ್ವಾತಂತ್ರ್ಯ ಭಾರತದಲ್ಲಿನ ಮಹಿಳೆಯರ ಸ್ಥಿತಿಗತಿಗಳನ್ನು ಸಮಗ್ರವಾಗಿ ಪರಾಮರ್ಶಿಸಿ ಬಿಡಿಸಿಟ್ಟಿತು.

ಈ ಬೆಳವಣಿಗೆ ಸಾಮಾಜಿಕ, ಆರ್ಥಿಕಕ್ಷೇತ್ರಗಳಲ್ಲಿ ಸುಧಾರಣೆ ಹಾಗೂ ಬದಲಾವಣೆ ತರುವಲ್ಲಿ ಮಹಿಳೆಯ ಸಕ್ರಿಯ ಪ್ರಾತಿನಿಧ್ಯ ಅನಿವಾರ್ಯ ಎಂಬುದನ್ನು ತೋರಿಸಿಕೊಟ್ಟಿತು. ಇದರ ಜೊತೆಯಲ್ಲೇ ಪ್ರಾತಿನಿಧ್ಯದ ಕೊರತೆಯನ್ನು, ಶಾಸಕಾಂಗಗಳಲ್ಲಿ 'ಅವಳ' ಸ್ಥಾನಗಳು ಇಳಿಮುಖವಾಗುತ್ತಿರುವುದನ್ನು ಎತ್ತಿಹೇಳಿತು. ಮಹಿಳೆಯರಿಗೆ ಆಡಳಿತಾಂಗದಲ್ಲಿ ಹೆಚ್ಚಿನ ಭಾಗವಹಿಸುವಿಕೆಗೆ ಅವಕಾಶ ನೀಡುವುದರಿಂದ ಲಿಂಗತಾರತಮ್ಯ, ಶೋಷಣೆ ಮತ್ತು ಅಸಮಾನತೆ ವಿರುದ್ಧ ಹೋರಾಡಲು ಸಾಧ್ಯವಾಗುತ್ತದೆ. ಹಾಗೂ ಮಹಿಳಾ ಸಬಲೀಕರಣದ ಗುರಿ ಹೊತ್ತ ವ್ಯವಸ್ಥೆ ಶಾಸನಸಭೆಗಳಲ್ಲಿ ಮಹಿಳೆಯರಿಗೆ 1/3ರಷ್ಟು ಸ್ಥಾನವನ್ನು ಕಾದಿರಿಸಬೇಕೆಂಬ ಅಭಿಪ್ರಾಯವನ್ನು 1996ರಲ್ಲಿ ಮಂಡಿಸಿತು. ಈ 1/3 ಯಾವ ಆಧಾರದ ಮೇಲೆ ನಿರ್ಧರಿಸಲಾಯಿತೆಂದು ಇಂದಿಗೂ ಸ್ಪಷ್ಟವಾಗಿಲ್ಲ!

ಇದರ ಅನ್ವಯ ಸಂವಿಧಾನದ 73ನೇ ಕಲಂನಲ್ಲಿ ತಿದ್ದುಪಡಿಯನ್ನು ತಂದು ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಶೇ. 33ರಷ್ಟು ಮೀಸಲನ್ನು ಕಲ್ಪಿಸಲಾಯಿತು. ಇಡೀ ದೇಶದಲ್ಲಿ ಇಂದು ಪಂಚಾಯತ್ ಮಟ್ಟದಲ್ಲಿ ಮೀಸಲು ಕಲ್ಪಿಸಿದ್ದರಿಂದ ಗ್ರಾಮಪಂಚಾಯ್ತಿ ಹಾಗೂ ಜಿಲ್ಲಾ ಪಂಚಾಯ್ತಿಗಳಲ್ಲಿ ಮಹಿಳೆಯರು ಪ್ರಾತಿನಿಧ್ಯ ಪಡೆದಿದ್ದಾರೆ. ವಿಧೇಯಕದಿಂದಾಗಿ ಪುರುಷ ಪ್ರಾಬಲ್ಯದ ವ್ಯವಸ್ಥೆಯಲ್ಲಿ ತಮ್ಮ ಸ್ಥಾನ ಗಟ್ಟಿಗೊಳಿಸಿ ಕೊಂಡಿದ್ದಾರೆ.

ಇದರ ಮುಂದುವರೆದ ಭಾಗವಾಗಿ ಲೋಕಸಭೆಯಲ್ಲೂ ಇಂತಹದೊಂದು ನಿರ್ಣಯಕ್ಕಾಗಿ ಸಂವಿಧಾನದ 368ನೇ ವಿಧಿಯಂತೆ, ತಿದ್ದುಪಡಿ ತಂದು, ವಿಧೇಯಕವೊಂದನ್ನು ಅನುಮೋದಿಸಲು ಸದ್ದುಗದ್ದಲ ಗೊಂದಲಗಳ ನಡುವೆ ಸರ್ಕಾರ ಮುಂಚೂಣಿಯಲ್ಲಿ ನಿಂತಿದೆ. ಈ ಮೀಸಲಾತಿಯಿಂದ ಈಗ ಇರುವ ಸ್ಥಾನಗಳು ಕೆಳಕಂಡಂತೆ ವಿಂಗಡಣೆಯಾಗುತ್ತವೆ.

ಲೋಕಸಭೆಯ ಒಟ್ಟು ಸ್ಥಾನ: 545–2=543 (ಇದರಲ್ಲಿ 2 ಸ್ಥಾನಗಳಿಗೆ ಆಂಗ್ಲೋಇಂಡಿಯನ್ ಸಮುದಾಯದವರನ್ನು ನಾಮಕರಣ ಮಾಡಲಾಗುತ್ತದೆ)

* ಪರಿಶಿಷ್ಟ ಜಾತಿ/ವರ್ಗದ ಪುರುಷ ಹಾಗೂ ಮಹಿಳೆಯರಿಗಾಗಿ 122 ಕ್ಷೇತ್ರಗಳು
* ಉಳಿದ ಸಾಮಾನ್ಯ ಕ್ಷೇತ್ರಗಳು 240
* ದೇಶದ 28 ರಾಜ್ಯಗಳಲ್ಲಿನ ಒಟ್ಟು ಶಾಸಕರು 4030 ಇವರಲ್ಲಿ ಮೀಸಲಾತಿಯಿಂದ 1330 ಮಹಿಳೆಯರು ಕ್ಷೇತ್ರಗಳನ್ನು ಪ್ರತಿನಿಧಿಸಲಿದ್ದಾರೆ.

**ಈಗಿನ ಚರ್ಚೆ**

ಹೆಚ್ಚಿನ ಚರ್ಚೆ, ಮಹಿಳಾ ಮೀಸಲಾತಿ ಯಾಕೆ ಬೇಕು? ಅದರಿಂದ ಆಗಬಹುದಾದ ಬದಲಾವಣೆಗಳೇನು? ಇಷ್ಟೊಂದು ಸುದೀರ್ಘವಾಗಿ ನೆನೆಗುದಿಗೆ ಬಿದ್ದಿದ್ದ ಬಿಲ್ ಮತ್ತೊಮ್ಮೆ ಚಲಾವಣೆಗೆ ಬಂದಿರುವಾಗ ವ್ಯರ್ಥಕಾಲಕ್ಷೇಪದ ಬದಲು ಉಳಿಸುವ ದಾರಿಗಾಗಿ ಹುಡುಕಾಟ. ಮಹಿಳೆಯರು ಬಂದರೆ ಹೊಸ ಸಮಾಜವೇ ನಿರ್ಮಾಣವಾಗ ಬಹುದೆಂಬ ಲೆಕ್ಕಾಚಾರ.

ಪ್ರತಿಸಲ ಆಡಳಿತಾ ರೂಢ ಸರ್ಕಾರ ಕಡತಗಳ ಮೇಲಿನ ಧೂಳು ಝಾಡಿಸಿ ಮಸೂದೆ ಮಂಡಿಸುತ್ತದೆ ಎಂದಾಗಲೆಲ್ಲ ಒಂದಿಲ್ಲೊಂದು ಪಕ್ಷ ಕ್ಯಾತೆ ತೆಗೆದ ವಿಚಾರ ಹಾಗೂ ಅದರ ಪರಾಮರ್ಶೆ, ಕಾಂಗ್ರೆಸ್ ನಾಯಕಿ ಸೋನಿಯಾ ಗಾಂಧಿ ತೋರಿದ ಛಲ, ಬದ್ಧತೆ, ಪಕ್ಷಭೇದ ಮರೆತು ವಿಧೇಯಕ 'ವಿಪ್' ಮೂಲಕ ಅಂಗೀಕಾರವಾದಾಗ ಕಟ್ಟಾ ಎಡಪಂಥೀಯ ಬೃಂದಾಕಾರಟ್, ಬಲಪಂಥೀಯ ಸುಷ್ಮಾ ಸ್ವರಾಜ್ ಗಟ್ಟಿಯಾಗಿ ಅಪ್ಪಿಕೊಂಡ ದೃಶ್ಯ, ಭ್ರಷ್ಟಾಚಾರ ಕಡಿಮೆಯಾಗಬಹುದೆಂಬ ಊಹೆ ಇತ್ಯಾದಿ ಇತ್ಯಾದಿ. ಅದರಾಚೆಗೆ ರಾಜ್ಯಸಭೆಯಲ್ಲಿ ಅಂಗೀಕಾರ ವಾದ ಈ ಮಸೂದೆ ರಾಷ್ಟ್ರಪತಿಗಳ ಅಂಕಿತ ಪಡೆದು ಶಾಸನವಾಗುವ ಮುಂಚೆ ಅದು ಕನಿಷ್ಠ 14 ರಾಜ್ಯಗಳ ವಿಧಾನಸಭೆ ಹಾಗೂ ವಿಧಾನ ಪರಿಷತ್ತುಗಳಲ್ಲಿ ಅಂಗೀಕಾರಗೊಳ್ಳಬೇಕು. ಅದು ಬಹಳ ಸುದೀರ್ಘ ಪ್ರಕ್ರಿಯೆ.

ಹೊಸಅಲೆಯ ಜೊತೆ ಹೊಸಆಕಾಂಕ್ಷೆಯ ಒತ್ತು ಎಲ್ಲಾ ಮಗ್ಗುಲುಗಳ ಕಡೆ ಅಲೆದಾಡುತ್ತಿದೆ. ಏನಿದು ಮಸೂದೆಯ ಪರ–ವಿರೋಧದ ಧ್ವನಿ?

**ವಿಧೇಯಕ ವಿರೋಧಿಸುವವರು:**

ಮಸೂದೆಯನ್ನು ಈಗಿರುವ ಸ್ವರೂಪದಲ್ಲೇ ಅಂಗೀಕರಿಸಿದರೆ ಇದರ ಲಾಭವನ್ನು ಬಲಿಷ್ಠ ವರ್ಗಗಳ ಮತ್ತು ಮೇಲ್ ಜಾತಿಯ ಮಹಿಳೆಯರೇ ಪಡೆಯುತ್ತಾರೆ. ಹಾಗಾಗಿ ಈ ಮಸೂದೆಯಲ್ಲಿ ಹಿಂದುಳಿದ ವರ್ಗದವರಿಗೆ, ದಲಿತರಿಗೆ ಹಾಗೂ ಮುಸ್ಲಿಂ ಮಹಿಳೆಯರಿಗೆ "ಒಳ ಮೀಸಲಾತಿ ಕಲ್ಪಿಸಿ" ಜಾರಿಗೆ ತನ್ನಿ.

ಲೋಕಸಭೆ ಹಾಗೂ ರಾಜ್ಯ ವಿಧಾನಸಭೆಗಳಲ್ಲಿ ಪರಿಶಿಷ್ಟ ಜಾತಿ ಹಾಗೂ ವರ್ಗಕ್ಕಾಗಿ 22.2% ಮೀಸಲಾತಿ ಕಲ್ಪಿಸಲಾಗಿದೆ. ಮಹಿಳಾ ಮೀಸಲಾತಿಯೂ ಸೇರಿದಲ್ಲಿ ಒಟ್ಟು ಮೀಸಲಾತಿಯ ಪ್ರಮಾಣ 55% ದಾಟುತ್ತದೆ. ಹಾಗಾಗಿ ಮಹಿಳಾ ಮೀಸಲಾತಿ ಪ್ರಮಾಣ ತಗ್ಗಿಸಿ.

ಮೀಸಲಾತಿ ಮಸೂದೆಯಲ್ಲಿರುವ ಕ್ಷೇತ್ರಗಳ 'ರೊಟೇಷನ್' ವ್ಯವಸ್ಥೆಯ ಅನ್ವಯ ಪ್ರತಿ ಚುನಾವಣೆಯ ಸಂದರ್ಭದಲ್ಲಿ ಮೀಸಲು ಕ್ಷೇತ್ರಗಳು ಬದಲಾಗುತ್ತವೆ. ಹಾಗಾಗಿ ಪ್ರತಿ 15 ವರ್ಷಗಳ ನಂತರ ಅಥವಾ ನಾಲ್ಕನೇ ಚುನಾವಣೆಯಲ್ಲಿ ಯಾವುದೇ ನಿರ್ದಿಷ್ಟ ಕ್ಷೇತ್ರ ಮಹಿಳಾ ಮೀಸಲು ಕ್ಷೇತ್ರವಾಗಿ ಪರಿವರ್ತನೆಗೊಳ್ಳುತ್ತದೆ. ಹಾಗಾಗಿ ಅಲ್ಲಿನ ಪುರುಷ ಶಾಸಕರು ಸಂಸದರು ಕ್ಷೇತ್ರದ ಅಭಿವೃದ್ಧಿಗೆ ಯತ್ನಿಸುವುದಿಲ್ಲ.

ಪರೋಕ್ಷವಾದ ವಾದ ಏನೆಂದರೆ ಪುರುಷರು ತಮ್ಮದೇ ಸ್ವತ್ತೇನೋ ಎಂಬತಿದ್ದ ಕ್ಷೇತ್ರಗಳನ್ನು ಕಳೆದುಕೊಳ್ಳಬೇಕಾದ ಆಘಾತ. ಇದು ಮಸೂದೆಯ ಪರವಾಗಿ ಇರುವವರಲ್ಲೂ ಕಾಣಬಹುದು.

**ವಿಧೇಯಕ ಇರ ಬೇಕೆನ್ನುವವರು:**

ಈಗಿರುವ ಲೋಕಸಭೆ ಮತ್ತು ವಿಧಾನಸಭೆಗಳಲ್ಲಿ ಮುಸ್ಲಿಮರಿಗೆ ಹಾಗೂ ಹಿಂದುಳಿದ ವರ್ಗದವರಿಗೆ ಮೀಸಲಾತಿ ಕಲ್ಪಿಸಿಲ್ಲ. ಹೀಗಿರುವಾಗ ಒಳಮೀಸಲಾತಿ ನೀಡುವ ಪ್ರಶ್ನೆಯೇ ಅನಗತ್ಯ ಮಹಿಳೆಯರೆಲ್ಲಾ ಒಂದೇ. ಎಲ್ಲರೂ ದಮನಕ್ಕೆ ಒಳಗಾಗಿದ್ದಾರೆ. ಹಾಗಾಗಿ ಒಳ ಮೀಸಲಾತಿ ಮಾತನಾಡಿ, ಜಾತಿ, ಧರ್ಮದ ನೆಪದಲ್ಲಿ ನಮ್ಮ ಒಗ್ಗಟ್ಟನ್ನು ಒಡೆಯದಿರಿ.

ಧರ್ಮದ ಆಧಾರದಲ್ಲಿ ಒಳಮೀಸಲಾತಿ ಕಲ್ಪಿಸುವುದನ್ನು ಸಂವಿಧಾನ ಸ್ಪಷ್ಟವಾಗಿ ನಿರಾಕರಿಸಿದೆ. ಹಿಂದುಳಿದವರಿಗೆ ಒಳಮೀಸಲಾತಿ ನೀಡಲು ಅವರ ಜನಸಂಖ್ಯೆ ನಿಖರವಾಗಿ ತಿಳಿದಿಲ್ಲ. ಮಂಡಲ್‌ವರದಿ ಜಾರಿಯ ಪರಿಣಾಮದಿಂದಾಗಿ ಈಗಾಗಲೇ ಉತ್ತರಪ್ರದೇಶ, ಬಿಹಾರ್ ವಿಧಾನಸಭೆಗಳಲ್ಲಿ ಶೇ. 40ರಷ್ಟು ಶಾಸಕರು ಹಿಂದುಳಿದ ವರ್ಗಗಳಿಗೆ ಸೇರಿದವರಾಗಿದ್ದಾರೆ.

63 ವರ್ಷಗಳ ನಂತರವೂ ಭಾರತದ ಪ್ರಜಾಪ್ರಭುತ್ವ ಪ್ರಬುದ್ಧ ವಾಗಿಲ್ಲ. ವೈಯಕ್ತಿಕ ಸಾಮರ್ಥ್ಯ, ಪ್ರಾಮಾಣಿಕತೆ, ಕೆಲಸ ಮಾಡುವ ಹುಮ್ಮಸ್ಸು ಯಾವುದನ್ನೂ ಲೆಕ್ಕಿಸದೇ ಕೇವಲ ಪಕ್ಷಕ್ಕಾಗಿ ಮತ ಚಲಾಯಿಸುವವರೇ ಹೆಚ್ಚಿದ್ದಾರೆ. ಎಲ್ಲಾ ರಾಜಕೀಯ ಪಕ್ಷಗಳೂ ಬಹುತೇಕವಾಗಿ ಜಾತಿ, ಧರ್ಮ ಆಧಾರಿತ 'ವೋಟ್‌ಬ್ಯಾಂಕ್' ರಾಜಕೀಯಕ್ಕೆ ಮೊರೆ ಹೋಗಿವೆ. ಮಹಿಳಾಮೀಸಲಾತಿ ಬಂದರೂ ಸಹ ಇದೇ ಮನೋಭಾವ ಮುಂದುವರಿಯುವ ಲಕ್ಷಣಗಳಿರುವುದರಿಂದ ಆಯಾ ಕ್ಷೇತ್ರದ ಜಾತಿ, ಧರ್ಮದ ಮಹಿಳಾಅಭ್ಯರ್ಥಿಗೇ ಟಿಕೆಟ್ ನೀಡಲಾಗುತ್ತದೆ.

**ಅವರಿಬ್ಬರೂ ಹೇಳದೆ ಇರುವುದೇನು :**

ವಿರೋಧವಾಗಿ ವಾದ ಮಂಡಿಸುತ್ತಿರುವವರು ಕೂಡ ದಲಿತ ಮಹಿಳೆಗೆ ಮೀಸಲಾತಿ ಎನ್ನುತ್ತಿದ್ದಾರೆ. ಸಂವಿಧಾನಾತ್ಮಕವಾಗಿ ಈಗಾಗಲೇ ಮಂಜೂರಾಗಿ ಇರುವುದರಿಂದ ವಿಧೇಯಕ ಅಂಗೀಕಾರವಾದರೆ ಶೇ. 22.2% ರಲ್ಲಿ ಶೇ. 33.3 ಪರಿಶಿಷ್ಟ ಜಾತಿಯ ಹಾಗೂ ವರ್ಗದ ಮಹಿಳೆಗೆ ಸಿಗುತ್ತದೆ. ಪರಿಶಿಷ್ಟ ಜಾತಿ ಹಾಗೂ ವರ್ಗಕ್ಕೆ ಮೀಸಲಿರುವ 122 ಕ್ಷೇತ್ರಗಳಲ್ಲಿ 40 ಕ್ಷೇತ್ರಗಳಿಗೆ ಮಹಿಳೆಯರು ಇರುತ್ತಾರೆ. ಇದರ ಅರಿವಿದ್ದುದರಿಂದಲೇ ಏನೋ ಅವರು ಹೆಚ್ಚೇನು ಸದ್ದು ಮಾಡದೆ ಏನನ್ನೂ ಗಟ್ಟಿಯಾಗಿ ಹೇಳದೆ ಸುಮ್ಮನಿದ್ದಾರೆ.

ಮೀಸಲಾತಿ ಶೇ. 50 ಮೀರುತ್ತದೆ, ಮೀರುತ್ತದೆ ಎಂದು ಬೊಬ್ಬೆ ಹಾಕುವವರಿಗೆ ಕೆಲವು ಮಾಹಿತಿಯ ಕೊರತೆ ಇದ್ದಂತೆ ಕಾಣುತ್ತದೆ.

1) ಶೇ. 50ರಷ್ಟು ಮೀಸಲಾತಿ ಮೀರಬಾರದೆಂಬ ವಿಧೇಯಕ ಆಗಿರುವುದು ಸರ್ಕಾರಿ ನೌಕರಿಗಳ ವಿಚಾರದಲ್ಲಿ. ರಾಜಕೀಯವಾಗಿ ಜಾತಿ/ವರ್ಗವಾರು ಸಂಖ್ಯೆಗಳಿಗೆ ಅನುಗುಣವಾಗಿ ಶೇ. ಇಷ್ಟೇ ಮೀಸಲಾತಿ ಇರಬೇಕೆಂದು ಎಲ್ಲೂ ಉಲ್ಲೇಖವಿಲ್ಲ.
2) ಹಿಂದುಳಿದ ವರ್ಗದ ಹಾಗೂ ಅಲ್ಪಸಂಖ್ಯಾತರನ್ನು ಒಟ್ಟಾಗಿ ಸೇರಿಸಿದರೆ ಅವರ ಜನಸಂಖ್ಯೆ ಶೇ. 62 ರಷ್ಟಾಗುತ್ತದೆ. ಮಂಡಲ್‌ವರದಿಯನ್ನು ಆಧಾರವಾಗಿ ಇಟ್ಟುಕೊಂಡು ಮೀಸಲಾತಿ ಕೊಟ್ಟರೆ ಶೇ. 27 ಅಷ್ಟೇ ಅವರಿಗೆ ದೊರಕುವುದು, ಅವರ ಜನಸಂಖ್ಯೆಯಷ್ಟಲ್ಲ. ಇದನ್ನೇ ಮಹಿಳಾ ಮೀಸಲಾತಿಗೂ ಅನ್ವಯಿಸಿದರೆ ಹಿಂದುಳಿದ ಹಾಗೂ ಮುಸ್ಲಿಂ ಮಹಿಳೆಯರಿಗೆ 48 ಸ್ಥಾನಗಳು ದೊರಕುತ್ತವೆ. ಉಳಿದ 93 ಸ್ಥಾನಗಳು (40 SC/ST ಗೆ–181) ಸಾಮಾನ್ಯ ಸ್ಥಾನಗಳಾಗಿದ್ದು ಯಾವುದೇ ಮಹಿಳೆ ಸ್ಪರ್ಧಿಸಬಹುದಾಗಿದೆ.

ನಮ್ಮ ಇತಿಹಾಸವನ್ನೇ ಹಿಂತಿರುಗಿ ನೋಡಿದರೆ, ಮೀಸಲಾತಿ ಇದ್ದುದರಿಂದಾಗಿ ಧ್ವನಿ ಪ್ರಾತಿನಿಧ್ಯ/ಪ್ರತಿನಿಧಿತ್ವ ಇಲ್ಲದವರು ಪಡೆದುದನ್ನು ಕಂಡಿದ್ದೇವೆ. ಹಿಂದುಳಿದ ಹಾಗೂ ಅಲ್ಪಸಂಖ್ಯಾತ ಮಹಿಳೆಯರಿಗೆ ಸಾಥ್ ಕೊಡುವ ಒಂದಂಶ ನಮ್ಮ ನಿಮ್ಮ ಮುಂದೆ ಇದೆ. ಒಪ್ಪಿಕೊಳ್ಳಲಾಗದ ನಮ್ಮ ಅಹಂ, ಅವರ ಹೆಸರುಹೇಳಿ ತಮ್ಮ ಮನಃಸ್ಥಿತಿ ಹೊರಗೆಡಹುತ್ತಿರುವವರ ಆಷಾಢಭೂತಿತನ, ಇವೆರಡರ ಮಧ್ಯೆ ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತ ಮಹಿಳೆ ನಲುಗಿದ್ದಾಳೆ.

ದಮನದ, ಶೋಷಣೆಯ, ತಾರತಮ್ಯದ ಹತ್ತಿಕ್ಕಿಸಿಕೊಂಡ ಪರಿಚಯ ಇರುವ ನಮಗೇಕೆ ನಲುಗಿದ ಮಹಿಳೆ ಕಾಣದಾಗಿದ್ದಾಳೆ??? ❑



# ಆರು ತಿಂಗಳ ನಂತರವೂ.....

• *ಸೇತುಮಾಧವ ಎಂ.ವಿ.*

*"ಮೇಲೆ ಮಳಿ, ಕೆಳಗೆ ಹೊಳಿ... ಯಾರಿಗೆ ಬೇಕು ನಮ್ಮ ಪಾಡು?"*

*"ಗಂಗೆವ್ವ ಹಿಂಗ್ಯಾಕ ಮಾಡಿದಿ*
*ರಾತ್ರೋ ರಾತ್ರೇನೆ ಭರಪೂರ ಆಗಿ*
*ಬದುಕ ಕೊಚ್ಚಿಕೊಂಡು ಹೋದಿಯಲ್ಲ..."*

ಇಂತಹ ಮಾತುಗಳು ಎಂತಹವರ ಮನವನ್ನೂ ಕಲಕಿ ಬಿಡುತ್ತವೆ. ನೆರೆ ಬಂದು, ಇಳಿದು 6 ತಿಂಗಳು ಕಳೆದಿವೆ. ಆದರೆ ನಿರಾಶ್ರಿತರ ಬದುಕು ಇನ್ನೂ ಸಾಗುತ್ತಲೇ ಇದೆ. ಪರಿಹಾರ, ಪರ್ಯಾಯ ಸ್ಥಳಗಳು, ನಿವಾಸಗಳು ಕೆಲವೆಡೆ ಶುರುವಾಗಿವೆ. ಕೆಲವೆಡೆ ವಾಸಕ್ಕೆ ಸಿದ್ಧವಾಗಿವೆ. ಭೌತಿಕವಾಗಿ 'ಶೆಡ್' ಜೀವನದಿಂದ ಮನೆ ಎಂದು ಕರೆಸಿಕೊಳ್ಳುವಲ್ಲಿಗೆ ವರ್ಗಾವಣೆಯಾಗುತ್ತಾರೆ. ಆದರೆ, ನಿಜವಾಗಿ ಕಳೆದು ಕೊಂಡದ್ದೇನು?

ರಾಯಚೂರಿನ ಚಿಕ್ಕಮಂಚಾಲೆ, ತಲಮಾರಿ, ಡೊಂಗ ರಾಂಪುರ, ಬಳ್ಳಾರಿ ಜಿಲ್ಲೆಯ ಸುಗ್ಗೇನಹಳ್ಳಿ ಪ್ರವಾಹದ ರಭಸಕ್ಕೆ ಕೊಚ್ಚಿ ಹೋಗಿದ್ದವು. ಪ್ರವಾಹದ ರಭಸ ಎಷ್ಟು ಎಂದು ತಿಳಿಯಲು ರಾಯಚೂರು – ಮಂತ್ರಾಲಯದ ನಡುವಿನ ಮುರಿದು ಬಿದ್ದಿರುವ ಸೇತುವೆ ಮೂಕ ಸಾಕ್ಷಿಯಾಗಿ ನಿಂತಿದೆ. ಪ್ರವಾಹದ ಆರ್ಭಟ ಅರ್ಥಮಾಡಿಕೊಳ್ಳಲು ಅನುಕೂಲ ವಾಗಲೆಂದೇ ಎತ್ತರ ಮರಗಳಲ್ಲಿ ಹುಲ್ಲು ಸಿಕ್ಕಿಹಾಕಿಕೊಂಡ ಬಟ್ಟೆಗಳು ಇನ್ನೂ ಇವೆ!

ರಾಜಧಾನಿಯಲ್ಲಿ ಡೊಂಗರಾಂಪುರದ ನಿವಾಸಗಳ ಕೀಲಿ ಯನ್ನು ಮುಖ್ಯಮಂತ್ರಿಗಳಿಗೆ ಹಸ್ತಾಂತರಿಸಿದಾಗ ಮನೆ ಗಳಿನ್ನೂ ಸಿದ್ಧಗೊಂಡಿರಲಿಲ್ಲ. ಫೆಬ್ರವರಿ ತಿಂಗಳ ಅಂತಿಮಕ್ಕಷ್ಟೇ ಶೌಚಾಲಯಗಳು ನಿರ್ಮಾಣವಾಗುತ್ತಿದ್ದವು. ಈ ದೀರ್ಘ ಅವಧಿಯಲ್ಲಿ ಜನರ ಸಹಜ ಪ್ರಕ್ರಿಯೆಗಳ ಬಗ್ಗೆ ಅದರಲ್ಲೂ ಮಹಿಳೆಯರ ದೈಹಿಕ, ಮಾನಸಿಕ ಆಘಾತಗಳಿಗೆ ಬೆಲೆ ಎಲ್ಲಿ? 'ಶೆಡ್'ಗಳು ಆ ಕ್ಷಣಕ್ಕೆ ಪರಿಹಾರವಾಗುತ್ತವೆ. ಆದರೆ ಅಲ್ಲಿಯೇ ಬದುಕು ಎಂಬಂತಾಗಿರುವುದು ದಿವ್ಯನಿರ್ಲಕ್ಷ್ಯಕ್ಕೊಂದು ಸಾಕ್ಷಿ. 'ಶೆಡ್'ಗಳ ರಚನೆ ಎಷ್ಟು ಭೀಕರ ಎಂದರೆ, ಅಲ್ಲಿ ಪ್ರಕೃತಿ ಕರೆಗಳಿಗೆ ಯಾವುದೇ ವ್ಯವಸ್ಥೆ ಇಲ್ಲ. ನಾಲ್ಕು ಕಡೆ ಜಿಂಕ್‌ಶೀಟ್‌ಗಳು, ಮೇಲೆ ಸೂರು. ಕುಟುಂಬದಿಂದ ಕುಟುಂಬ ಬೇರ್ಪಡೆಯಾಗಲು ಬಿದಿರಿನ ತಡಿಕೆ. ಇಲ್ಲಿ ಯಾವ ರೀತಿಯ ಬದುಕು ಸಾಗಿಸಲು ಸಾಧ್ಯ? ಇನ್ನೂ ಅವರ ಬದುಕಿನ ಮಾರ್ಗೋಪಾಯಗಳ ಬಗ್ಗೆ ಚಿಂತನೆ ನಡೆದೇ ಇಲ್ಲ. ಪ್ರವಾಹದಲ್ಲಿ ಇದ್ದ ಬದ್ದದ್ದನ್ನೆಲ್ಲ ಕಳೆದುಕೊಂಡವರಿಗೆ ಪರಿಹಾರ ರೂಪದಲ್ಲಿ ಹಣ ನೀಡಲಾಗಿದೆ. ಈ ಹಣ ಹಂಚಿಕೆಯ ವಿಷಯಗಳಲ್ಲಿ ಸಾಕಷ್ಟು ತೊಡಕುಗಳು ಎದುರಾಗಿವೆ. ರಾಜಕೀಯ ತನ್ನ ಕಬಂಧಬಾಹುವನ್ನು ಚಾಚಿದೆ. ಪರಿಹಾರದ ಹಣವನ್ನು ಯಾವ ಆಧಾರದ ಮೇಲೆ ನಿಗದಿ ಮಾಡಲಾಗಿದೆ ಎಂಬುದು ಗುಮಾನಿಗೆ ದಾರಿ ಮಾಡಿಕೊಟ್ಟಿದೆ. ಇನ್ನೂ ಹಲವೆಡೆ ರೂ. 2000 ಪರಿಹಾರ ಧನ ಪಡೆಯಲು ರೂ. 4000 ಖರ್ಚು ಮಾಡಿ, ಇನ್ನೂ ಹಣ ಕೈಗೆ ಸಿಗದೆ ಚಡಪಡಿಸುತ್ತಿದ್ದಾರೆ. ಹಾನಿಗೊಳಗಾಗಿರುವ ವಸ್ತು, ದವಸ, ಧಾನ್ಯ, ಜಾನುವಾರು, ಮನೆ (ಅರೆ ಕುಸಿದ ಮನೆಗಳು, ಪಾರ್ಶ್ವಕುಸಿತ ಮನೆಗಳು) ಇವುಗಳನ್ನೆಲ್ಲ ಲೆಕ್ಕಹಾಕಿ ನೀಡಲಾದ ಪರಿಹಾರ ಬದುಕನ್ನು ರೂಪಿಸುವಲ್ಲಿ ತೊಡಕಾಗಿದೆ.

'ತಲಮಾರಿ' ಎಂಬುದು ರಾಯಚೂರು ತಾಲ್ಲೂಕಿನ ದೊಡ್ಡಹಳ್ಳಿ. ಸಂಪೂರ್ಣ ಹಳ್ಳಿಯೇ ನೀರಿನಲ್ಲಿ ಮುಳುಗಿ ಹೋಗಿತ್ತು. ಅಲ್ಲಿಯ ಕೆಲವು ಹೆಂಗಸರನ್ನು ಮಾತನಾಡಿಸಿದಾಗ, ಒಬ್ಬ ತಾಯಿ ತನ್ನ ಪ್ರೌಢವಾಸ್ಥೆಯ ಮಗಳನ್ನು ಅಸಹಾಯಕತೆ ಯಿಂದ ನೋಡುತ್ತಿದ್ದಳು. ಯಾಕೆಂದರೆ ಉಟ್ಟ ಬಟ್ಟೆ ಬಿಟ್ಟರೆ ಬೇರೆ ಇಲ್ಲ. ತನ್ನ ಮಾಸಿಕ ಋತುಚಕ್ರದ ಸಂದರ್ಭದಲ್ಲಿ ಆ ಹುಡುಗಿ ಪಟ್ಟಿರುವ ಯಾತನೆಯನ್ನು ಯಾವ ಪರಿಹಾರವೂ ಸರಿದೂಗಿಸುವುದಿಲ್ಲ. ಆ ಹುಡುಗಿಯನ್ನೇ ಮಾತನಾಡಿಸಿ ದಾಗ, ತಾನು ಚೆಂದದ ಬಟ್ಟೆ ಹಾಕಿ, ಇತರರಂತೆ ಶೃಂಗರಿಸಿ ಕೊಳ್ಳುವ ಆಕೆಯ ಆಸೆ.... ?!

ಧಾರವಾಡದ ನವಿಲುಗುಂದದ ಒಬ್ಬ ಮಾಸ್ತರು. ಮಕ್ಕಳ ಆರೋಗ್ಯ ಪೂರ್ಣ ಬೆಳವಣಿಗೆಗೆ ಅನುವಾಗಲೆಂದು ಅಂಗಲಾಚಿ ಸಾಹಿತಿಗಳಿಂದ, ಆಸಕ್ತರಿಂದ ಪುಸ್ತಕ ಗಳನ್ನು ಶೇಖರಿಸಿ ಭಂಡಾರ ರೂಪಿಸಿದ್ದರು, ತಮ್ಮ ಮಣ್ಣಿನ ಮನೆಯಲ್ಲಿ. ಪ್ರವಾಹಕ್ಕೆ ಈ ಮಾಸ್ತರರ ಮನೆಯೂ ಕೊಚ್ಚಿ ಹೋಯಿತು. ಶ್ರಮವಹಿಸಿ ಸಂಗ್ರಹಿಸಿದ್ದ ಪುಸ್ತಕಗಳೂ ನೀರು ಪಾಲಾದವು. ಆದರೆ, ಆ ಮಾಸ್ತರರ ಅಳಲು ಮನೆ ಹೋಗಿದ್ದರ ಬಗ್ಗೆ ಅಲ್ಲ, ಪುಸ್ತಕಗಳು ಕೊಚ್ಚಿಕೊಂಡು ಹೋಯಿತಲ್ಲ ಎಂದು ದುಃಖಿತರಾಗಿದ್ದಾರೆ. ಇಂತಹ ಅಸಂಖ್ಯಾತ ಅಲಿಖಿತ, ದಾಖಲಾತಿಯಾಗದ ನೋವಿನ ಸಂಗತಿಗಳು ತುಂಬಿ ಹೋಗಿವೆ.

ಮಕ್ಕಳ ಶಿಕ್ಷಣಕ್ಕೆ ತೊಂದರೆ, ಪ್ರವಾಹದ ಭೀತಿ ಮಕ್ಕಳ ಮೇಲೆ ಆಗಿರಬಹುದಾದ ಪರಿಣಾಮ ಭೀಕರ. ಅವರಿಗೆ ಸಾಂತ್ವನ ನೀಡುವ ಯಾವ ಕಾರ್ಯಕ್ರಮಗಳೂ ನಡೆದಿಲ್ಲ. ಇನ್ನೊಂದೆಡೆ ಭಿಕ್ಷಾಟನೆ ಅಧಿಕವಾಗುತ್ತಿದೆ ಎಂಬುದು ಹಲವು ಸ್ಥಳೀಯರ ಚಿಂತೆಗೆ ಕಾರಣವಾಗಿದೆ.





'ತಲಮಾರಿ' ಹಳ್ಳಿಯನ್ನು ಸಂಪೂರ್ಣವಾಗಿ ಸ್ಥಳಾಂತರಿಸುವ ಮತ್ತು ಪರ್ಯಾಯ ವಸತಿ ಸೌಕರ್ಯಗಳನ್ನು ಕಲ್ಪಿಸುವ ಜವಾಬ್ದಾರಿಯನ್ನು 'ಸಿಸ್ಕೋ' ಕಂಪನಿಯು ತೆಗೆದುಕೊಂಡಿದೆ. ವಿಪರ್ಯಾಸವೆಂದರೆ, ಫೆಬ್ರವರಿ 23ರಂದು ಗುದ್ದಲಿ ಪೂಜೆ ನಡೆದಿದೆ. ಅಂದರೆ ಮಳೆಗಾಲಕ್ಕೆ ಮುನ್ನ 800 ಮನೆಗಳು ವಾಸ ಯೋಗ್ಯವಾಗಬೇಕು. ಅಲ್ಲಿಯ ಮಣ್ಣು-ಕಪ್ಪು. ಒಂದೇ ಒಂದು ಮಳೆ ಬಿದ್ದರೂ ನಡೆದಾಡುವುದು ಕಷ್ಟ. ಇಂತಹ ದೂರದೃಷ್ಟಿ ಇರದ, ಕಾಳಜಿ ಕಳಕಳಿಯಿರದ ಹಲವು ಸಂಗತಿಗಳು ಎದೆಯಾಂತರಾಳದಲ್ಲಿಯೇ ಉಳಿದು ಕೊಂಡುಬಿಟ್ಟಿವೆ. ಬಿಜಾಪುರ ಜಿಲ್ಲೆಯ 'ಮಿರಗಿ' ಎಂಬಲ್ಲಿ ಒಬ್ಬ ತಾಯಿ ಇದ್ದ ಮೂವರು ಮಕ್ಕಳಲ್ಲಿ ಇಬ್ಬರನ್ನು ಕಳೆದುಕೊಂಡು ಅನಾಥಳಾಗಿದ್ದಾಳೆ. ತನ್ನ ದುಃಖ ವ್ಯಕ್ತಪಡಿಸಲು ಆಕೆಗೆ ಆಗುತ್ತಿಲ್ಲ. ಮನೆಯವರು ಆಕೆಯನ್ನು ಸದಾ ಅಳಬಾರದೆಂದು ತಾಕೀತು ಮಾಡಿದ್ದಾರೆ. ಆದರೆ, ತನ್ನ ಮಡುಗಟ್ಟಿದ ಭಾವನೆಗಳನ್ನು ಬಿಚ್ಚಿಕೊಳ್ಳಲಾಗದೆ ಒದ್ದಾಡುತ್ತಿರುವ ಆಕೆ, ಊರಿನಲ್ಲಿ ಯಾರೇ ಸತ್ತರೂ ಅಲ್ಲಿ ಹೋಗಿ ಜೋರಾಗಿ ಅಳುತ್ತಾಳೆ. ಹೀಗೆ, ತನ್ನೊಳಗಿನ ಹತಾಶೆ, ನೋವುಗಳನ್ನು ಹೊರಹಾಕುತ್ತಿದ್ದಾಳೆ. ಇನ್ನು ಕೆಲವರ ಪ್ರಕಾರ ಸತ್ತವರಿಗೆ ಒಂದು ಲಕ್ಷ ರೂಪಾಯಿ ಪರಿಹಾರ ನೀಡಲಾಗಿದೆ. ಆಕೆಗೇನು ಲಕ್ಷ ಲಕ್ಷ ದುಡ್ಡು ಬಂದಿದೆ ಎಂಬ ನಿರ್ದಯಿಗಳ ಅಣಕ ಮತ್ತಷ್ಟು ಹಿಂಸೆಯ ಸಂಗತಿ.

ಒಟ್ಟಾರೆ, ನೆರೆ ಬಂದು ಆರು ತಿಂಗಳು ಕಳೆದರೂ, ನಿರಾಶ್ರಿತರ ಬದುಕಿನಲ್ಲಿ ಕಿಂಚಿತ್ತೂ ಬದಲಾವಣೆಗಳಾಗದೆ ಇನ್ನಷ್ಟು ಹತಾಶೆಯನ್ನು ತುಂಬಿದೆ. ಇದು ನಮ್ಮ ಯೋಜನಾ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಹಾಗೆಯೇ ಲಿಂಗ ತಾರತಮ್ಯ ಅಥವಾ ಲಿಂಗ ಸೂಕ್ಷ್ಮತೆಯ ಕೊರತೆಯನ್ನು ಢಾಳಾಗಿ ತೋರಿಸುತ್ತದೆ. ಸಾರ್ವಜನಿಕರೂ ಸಹ ಆ ಕ್ಷಣಕ್ಕೆ ಸಹಾಯಹಸ್ತ ಚಾಚಿರಬಹುದು. ಆದರೆ ಮುಂದೇನಾಯಿತು ಎನ್ನುವುದನ್ನು ಕೇಳುತ್ತಿಲ್ಲ. ಮುಖ್ಯಮಂತ್ರಿಗಳು ನಿಧಿ ಸಂಗ್ರಹಕ್ಕಾಗಿ 'ಪಾದಯಾತ್ರೆ' ಕೈಗೊಂಡರು. ಪ್ರತಿ ಇಲಾಖೆಗಳಲ್ಲಿ ಕಂಟ್ರಾಕ್ಟರ್ ಅಥವಾ ಅಂತಹವರಿಗೆ ಇಷ್ಟಿಷ್ಟು ವಂತಿಗೆ ನೀಡಬೇಕು ಎಂದರು. ಹಣ ಧಾರಾಳವಾಗಿ ಹರಿದುಬಂತು. ಹಾಗೆ ಲೆಕ್ಕ ಹಾಕಿದರೆ ಕೋಟಿ ಕೋಟಿ ಹಣ ಕ್ರೋಢೀಕರಣವಾಗಿದೆ. ಖರ್ಚಾಗಿರುವುದು ಎಲ್ಲಿ? ಎಷ್ಟು? ಎಂಬುದು ಪ್ರಶ್ನಾರ್ಹ. ಅಲ್ಲದೇ ಇಷ್ಟು ದಿನಗಳಾದರೂ ನೆರೆಹಾವಳಿ ಸಂಬಂಧಿ ಆಯ-ವ್ಯಯದ ಶ್ವೇತಪತ್ರ ಸಹ ಹೊರಬಂದಿಲ್ಲ. ಇದೆಲ್ಲ ಏನನ್ನು ಸೂಚಿಸುತ್ತದೆ ಎಂಬುದನ್ನು ಮುಖ್ಯಮಂತ್ರಿಗಳೇ ಹೇಳಬೇಕು. ನೆರೆಹಾವಳಿ ಸಂತ್ರಸ್ತರಿಗೆ ಕರುಣೆ ಬೇಡ, ಬದುಕು ಕಟ್ಟಿ ಕೊಳ್ಳುವ ಹೊಸ ಉಸಿರುಬೇಕು. ಅವರನ್ನೇ ಮುಂದಿಟ್ಟುಕೊಂಡು ಪ್ರಚಾರ ಮಾಡಿ ಕೊಂಡವರಿಗೆ ಇಷ್ಟನ್ನಾದರೂ ಒದಗಿಸಲು ಸಾಧ್ಯವಿರಲಿಲ್ಲವೆ? ❑

## ಬೇರೆ ಹಾಡು

ಕೋಗಿಲೆ ಹಾಡಿತು
ಅವನು ಬರುತ್ತಾನೆ ಅಂತ

ಕಾಡೆಲ್ಲ ನವಿರೆದ್ದಿತು
ಅವನು ದಾಟಿದ ಕಡವು
ಮಡದಿಯೊಡನಿದ್ದ ಚಿತ್ರಕೂಟ
ಕಾಗೆ ಮೇಲೆ ಬ್ರಹ್ಮಾಸ್ತ್ರ ಬಿಟ್ಟಜಾಗ
ಗಿಣಿಯಜ್ಜಿ ಕಚ್ಚಿಕೊಟ್ಟ ಹಣ್ಣು ತಂದ ಗುಡಿಸಲು
ಎಲ್ಲ ಸಿಂಗಾರಾದವು

ಅವನು ಬಂದ
ಕೋದಂಡ ಕಿರೀಟಗಳಲ್ಲಿ
ಪುಷ್ಪಕದಲ್ಲಿ
ಮೊಗದಲ್ಲಿ ಮಂದಹಾಸ
ಕೈಯಲೊಂದು ಚಂದ್ರಹಾಸ

ಹುಡುಕುತ್ತ ಹುಡುಕುತ್ತ
ಸ್ವಾಧ್ಯಾಯದ ತಪಸ್ವಿಗಳು ಅವಿತ ಜಾಗ
ಬದಿರ ಮೆಳೆಮೇಲೆ
ಕೆನ್ನೀರು ಹನಿಯಿತು

ಪಂಚವಟಿಯ ಹಾಡು
ಕಿಷ್ಕಿಂಧೆಯ ಹಾಡು
ಋಷ್ಯಮೂಕದ ಹಾಡು
ಎಲ್ಲ ಮೂಗುವಟ್ಟವು

ಲಂಕೆಯ ಶ್ಯಾಮಲ ಸುಂದರಿಯರು
ಮೂಗಲ್ಲಿ ಗುನುಗುವರು
ಅವನ ಪರಾಕ್ರಮದ ಹಾಡು

ಹುತ್ತದೊಳಗೆ ಹುಟ್ಟಿದ
ಕೋಗಿಲೇ
ಬೇರೆ ಹಾಡು ಎಲ್ಲಿದೆ

ಅವಳಿ ಜವಳಿ ಹುಲ್ಲಿನಲ್ಲೆ?
ಅವಳಿ ಜವಳಿ ದರ್ಭೆಯಲ್ಲೆ?
ಎಲೆ ಮನೆಯ ಎಲೆ ಎಲೆಯಲ್ಲೇ
ಭೂಗರ್ಭದ ಅರಮನೆಯಲ್ಲೇ
ಬೇರೆ ಹಾಡು ಎಲ್ಲಿದೆ?
ಅದೋ ಕುದುರೆ ಬರುತಿದೆ.

● ಸ. ಉಷಾ



# ತಾಯ್ಮರಣದ ದುರಂತ ಕಥೆಗಳು

*ಸಂಗ್ರಹ : ಬಿ.ಎನ್.ಎಸ್.*

ತಾಯಂದಿರ ಸಾವಿನ Ratio (Maternal Mortality Ratio (MMR)) ವನ್ನು ಪ್ರತಿ ಒಂದು ಲಕ್ಷ ಹೆರಿಗೆಗಳಲ್ಲಿ ಮರಣ ಹೊಂದಿದವರ ಸಂಖ್ಯೆಯ ಮೂಲಕ ಲೆಕ್ಕಮಾಡಲಾಗುತ್ತದೆ. ಈ ಅಂಕಿಅಂಶ ನೋಡಿ : 2005ರಲ್ಲಿ ರಷ್ಯಾದಲ್ಲಿ ಆದ ಹೆರಿಗೆಮರಣದ ಪ್ರಮಾಣದ 16 ಪಟ್ಟು, ಚೀನಾಗಿಂತ 10 ಪಟ್ಟು, ಹಾಗೂ ಬ್ರೆಜಿಲ್‌ಗಿಂತ 4 ಪಟ್ಟು ಹೆಚ್ಚು ಹೆರಿಗೆಮರಣಗಳು ಭಾರತದಲ್ಲಿ ಆಗಿತ್ತು. ಈಗ, ಇನ್ನೇನು ಸೂಪರ್ ಪವರ್ ದೇಶವಾಗಿಬಿಟ್ಟೆವೆಂದು ಹೇಳಿಕೊಳ್ಳುತ್ತಿರುವ ಈ ದೇಶದಲ್ಲಿ ಹೆರಿಗೆ ವೇಳೆಯಲ್ಲಿ ತಾಯಂದಿರ ಮರಣಸಂಖ್ಯೆ ಏಕೆ ಇಷ್ಟು ಹೆಚ್ಚಾಗಿದೆ? ಮಾನವ ಹಕ್ಕು ಕಾವಲು ಸಮಿತಿಯು ಮಾಡಿರುವ ಒಂದು ವರದಿಯ ಪ್ರಕಾರ ಪ್ರತಿವರ್ಷವೂ ತಾಯಂದಿರು ಹೆರಿಗೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಸಾವನ್ನಪ್ಪುತ್ತಿರುವುದನ್ನು ಕಂಡು ಹಿಡಿಯಲು ಯಾವುದೇ ಏಕಕ್ರಮದ ತಾಂತ್ರಿಕತೆಯಾಗಲಿ, ವ್ಯವಸ್ಥೆಯಾಗಲಿ ನಮ್ಮ ದೇಶದಲ್ಲಿ ಇಲ್ಲ. ಉತ್ತರಪ್ರದೇಶ ರಾಜ್ಯದಲ್ಲಿ ನವೆಂಬರ್ 2008 ರಿಂದ ಹಿಡಿದು ಆಗಸ್ಟ್, 2009ರ ವರೆಗಿನ ಅವಧಿಯಲ್ಲಿ ನಡೆಸಲಾದ ಸಂಶೋಧನೆ ಮತ್ತು ಕ್ಷೇತ್ರಕಾರ್ಯಗಳ ಆಧಾರದ ಮೇಲೆ MMR ವರದಿಯು ಸಿದ್ಧವಾಗಿದೆ. ಈ ವರದಿ ಪ್ರತಿಪಾದಿಸುವ ಪ್ರಕಾರ ನಮ್ಮ ದೇಶವು ಕೈಗೊಂಡಿರುವ 'ಸಹಸ್ರಮಾನ ಅಭಿವೃದ್ಧಿ ಯೋಜನೆ' ಪ್ರಕಾರ ತಾಯ್ಮರಣಗಳ ಸಂಖ್ಯೆಯನ್ನು 75% ರಷ್ಟು ಕುಗ್ಗಿಸಬೇಕೆಂದು ಇಟ್ಟುಕೊಂಡಿರುವ ಗುರಿಯನ್ನು ನಿಜವಾಗಿ ತಲುಪಬೇಕಿದ್ದರೆ ದೇಶದಾದ್ಯಂತವೂ ಸರ್ಕಾರದ ಅಧಿಕಾರಿಗಳು ತಾವು ಅನುಸರಿಸುತ್ತಿರುವ ಆರೋಗ್ಯನೀತಿಗಳು ಹೆಣ್ಣುಮಕ್ಕಳ ಹಿನ್ನೆಲೆ ಪರಿಸರ, ಆದಾಯ, ಜಾತಿಗಳ ಗಣನೆಯಿರದಂತೆ ಎಲ್ಲಾ ಮಹಿಳೆಯರು ಮತ್ತು ಹುಡುಗಿಯರ ಬದುಕಿನಲ್ಲಿ ಪರಿವರ್ತನೆ ತರಬಲ್ಲವೆಂದು ಖಾತ್ರಿಪಡಿಸಬೇಕಿದೆ.

ಈ MMR ವರದಿಯನ್ನು ಸಿದ್ಧಪಡಿಸಿದಾಕೆ ಅರುಣಾ ಕಶ್ಯಪ್. ಈಕೆ ಮಾನವಹಕ್ಕು ಕಾವಲು ಸಮಿತಿಯ ಮಹಿಳಾ ವಿಭಾಗದ ಒಬ್ಬ ಸಂಶೋಧಕಿ. ಅವರ ಈ ವರದಿ ಉತ್ತರಪ್ರದೇಶವನ್ನೇ ಕೇಂದ್ರ ವಾಗಿಟ್ಟುಕೊಳ್ಳಲು ಕಾರಣವೆಂದರೆ ತಾಯ್ಮರಣದ ಪ್ರಮಾಣ ಈ ರಾಜ್ಯದಲ್ಲಿ ಗರಿಷ್ಠ ಪ್ರಮಾಣದಲ್ಲಿದ್ದು ಸರ್ಕಾರ ತಾಯ್ಮರಣದ ಎಲ್ಲಾ ಕೇಸುಗಳನ್ನೂ ತನಿಖೆ ನಡೆಸುವುದಕ್ಕಾಗಿ ಕಾರ್ಯಕಾರಿ ಆಜ್ಞೆಯನ್ನು ಹೊರಡಿಸಿದೆ ಎಂಬುದಾಗಿದೆ.

ಭಾರತದಲ್ಲಿ ತಾಯ್ತನದ ಸಾಮರ್ಥ್ಯ ಪಡೆದ ಪ್ರತಿ 70 ಹುಡುಗಿಯರಲ್ಲಿ ಒಬ್ಬಳು ಅಭದ್ರ ಗರ್ಭಧಾರಣೆ, ಅಸುರಕ್ಷಿತ ಹೆರಿಗೆ ಅಥವಾ ಗರ್ಭಪಾತದಿಂದ ಸಾವನ್ನು ಅಪ್ಪುತ್ತಾಳೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ 7,300ರಲ್ಲಿ ಒಬ್ಬಾಕೆ ಹೀಗೆ ಸಾಯಬಹುದಷ್ಟೇ ಎಂದು ಈ ವರದಿ ಹೇಳುತ್ತದೆ. ಜಾಗತಿಕ ಆರೋಗ್ಯ ಸಂಸ್ಥೆ (WHO) ನಡೆಸಿದ 2005ರ ಅಧ್ಯಯನವನ್ನು ಉಲ್ಲೇಖಿಸಿ ಈ ವರದಿಯು ವಿಶ್ವದ ತಾಯ್ಮರಣದ ಪ್ರಮಾಣಕ್ಕೆ 1/4ನೇ ಭಾಗದಷ್ಟು ಕಾಣಿಕೆ ಭಾರತ ವೊಂದರಿಂದಲೇ ಸಲ್ಲುತ್ತಿದೆ, ಇಲ್ಲಿ ಪ್ರತಿ 100,000 ಜನನಗಳಲ್ಲಿ 450 ತಾಯ್ಮರಣಗಳಾಗಿರುತ್ತವೆ ಎಂದು ತಿಳಿಸುತ್ತದೆ.

### ದಾಖಲೆಗಳು ಸತ್ಯಕ್ಕೆ ಹಾಕಿದ ಮುಸುಕುಗಳು

ತಾಯ್ಮರಣದ ಅಂಕಿ ಸಂಖ್ಯೆಗಳ ಬಗ್ಗೆ ಒಂದಿಷ್ಟು ದಾಖಲೆಗಳನ್ನು ಕಾಯ್ದಿಟ್ಟಿರುವುದುಂಟು. ಆದರೆ ಈ ದಾಖಲೆಗಳು ವಿವಿಧ ಸಮುದಾಯಗಳಲ್ಲಿ ಬೇರೆ ಬೇರೆ ರಾಜ್ಯಗಳ ಒಳಗೇ ಇರಬಹುದಾದ ತಾರತಮ್ಯಗಳಿಗೆ ಮುಸುಕು ತೊಡಿಸಿರುತ್ತವೆ. ಉದಾಹರಣೆಗೆ, ಅತಿ ಹೆಚ್ಚಿನ ಪರ್‌ಕ್ಯಾಪಿಟಾ ಆದಾಯ ವಿರುವಂಥ ರಾಜ್ಯಗಳಾದ ಹರ್ಯಾಣ ಮತ್ತು ಪಂಜಾಬ್‌ಗಳಲ್ಲಿಯೇ ತಾಯ್ಮರಣದ ಹೆಚ್ಚಳ ಏಕೆ ಎಂಬುದಕ್ಕೆ ಏನಾದರೂ ವಿವರಣೆ ಅವಶ್ಯಕ. ಅದರ ಜೊತೆಗೆ ಬಡವರ್ಗ ಗಳಲ್ಲಿ ಬಾಣಂತಿಯರ ಆರೋಗ್ಯ ರಕ್ಷಣೆ ತೀರಾ ಕಳಪೆಯಾಗಿಯೇ ಉಳಿದಿದೆ. ವಿಶೇಷವಾಗಿ ಸೀಮಾಂತಗಳಲ್ಲಿರುವ ದಲಿತ ಸಮುದಾಯಗಳಲ್ಲಿ ಇಂಥ ರಕ್ಷಣೆಯ ವ್ಯವಸ್ಥೆ ತೀರಾ ಕಳಪೆ. ಹೀಗೆ, ಸಮಾಜದ ಒಂದು ವಲಯದಲ್ಲಿ ಕಳಪೆ ಬಾಣಂತಿ ಆರೋಗ್ಯ ರಕ್ಷಣೆ ಈಗಾಗಲೇ ಅಸ್ತಿತ್ವದಲ್ಲಿದ್ದರೆ, ಈ ಹಿಂದೆ ತಾಯ್ಮರಣದ ಸಂಖ್ಯೆ ಹೆಚ್ಚಾಗಿ ವರದಿ ಆಗಿರದಿದ್ದ ವಲಯಗಳಲ್ಲೂ ಈಗ ಅದರ ಪ್ರಮಾಣ ವರ್ಧಿಸಿದೆ. ಬೇರೆ ಬೇರೆ ರಾಜ್ಯಗಳ ನಡುವೆಯೂ ಇಂತಹ ಅಜಗಜಾಂತರಗಳಿವೆ. ಉತ್ತರಪ್ರದೇಶದ MMR ತಮಿಳುನಾಡಿನದಕ್ಕಿಂತ ಮೂರು ಪಟ್ಟು ಹೆಚ್ಚಿನದು. ರಾಜ್ಯಗಳ ಒಳಗಡೆಯೂ ಆರ್ಥಿಕ ಅಂಶಗಳು, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರಣಗಳಿಂದಲೂ ಆರೋಗ್ಯವ್ಯವಸ್ಥೆಗೆ ಪ್ರವೇಶಾವಕಾಶಗಳಲ್ಲಿ



ತೀರಾ ಅಂತರ ಗಳಿದ್ದಾವೆಂದು MMR ವರದಿಯು ಹೇಳುತ್ತದೆ. ಆರೋಗ್ಯ ಸಂರಕ್ಷಣಾ ಕೇಂದ್ರಗಳಿಗೆ ಎಷ್ಟು ಬಾರಿ ಭೇಟಿಕೊಡಲು ಎಷ್ಟರಮಟ್ಟಿಗೆ ಜನ ಸಿದ್ಧರಿದ್ದಾರೆ ಎಂಬುದನ್ನು ಪರಿಶೀಲಿಸಿದರೆ, ಸುಲಭದ್ದೂ ಅಗ್ಗದ್ದೂ ಆದ ಸೌಲಭ್ಯಕ್ಕೆ ಜನ ಹೆಚ್ಚು ಯತ್ನಿಸುತ್ತಾರೆಂಬುದು ಸ್ಪಷ್ಟವಾಗಬಲ್ಲದು. ಎಷ್ಟೋ ಜಾಗಗಳಲ್ಲಿ ಇಂಥ ಸೌಲಭ್ಯಗಳೂ ಕಾಣೆಯಾಗಿವೆ. ಜನರ ಆರೋಗ್ಯ ರಕ್ಷಣೆಯ ಮೂಲಭೂತ ಅವಶ್ಯಕತೆಗಳನ್ನು ಮಾನವೀಯವಾಗಿ ಸಮೀಪಿಸುವ ಧೋರಣೆಯ ಕೊರತೆಯೇ ಎದ್ದು ತೋರುತ್ತದೆ.

### ಅಗತ್ಯವಿದ್ದ ಕಾಲದಲ್ಲೇ ನಿರ್ಲಕ್ಷ್ಯ

ಉತ್ತರಪ್ರದೇಶದಲ್ಲಿ ನಡೆಸಲಾದ ಸಂಶೋಧನೆಯು ತೋರಿಸಿಕೊಟ್ಟಿರುವ ಪ್ರಕಾರ ಒಬ್ಬ ಆರೋಗ್ಯಕಾರ್ಯಕರ್ತೆಗೆ ಹೆರಿಗೆ ಮಾಡಿಸಲು ತರಬೇತಿ ನೀಡಿದ್ದರೂ ಹೆರಿಗೆಯ ಸಂಬಂಧದ ಪ್ರಥಮ ಚಿಕಿತ್ಸೆಗೆ ಅವಶ್ಯಕವಾದ ಔಷಧಿ ಸಾಮಗ್ರಿಗಳ ಪೂರೈಕೆ ಸರಿಯಾಗಿ ಆಗದೆ ಇರುವುದು, ಹೆರಿಗೆಯ ತುರ್ತು ರಕ್ಷಣಾನುಕೂಲಗಳ ಅಭಾವ ಹಾಗೂ ಅಧಿಕ ರಕ್ತಸ್ರಾವ, ಕ್ಲಿಷ್ಟಕರ ಹೆರಿಗೆ ಹಾಗೂ ಹೆಚ್ಚಿದ ರಕ್ತದ ಒತ್ತಡದಿಂದ ಏರುಪೇರು ಮುಂತಾದ ಸನ್ನಿವೇಶಗಳಲ್ಲಿ ಪರ್ಯಾಯ ವ್ಯವಸ್ಥೆಗಳು ಇಲ್ಲದಿರುವುದು ಮುಂತಾದ ಸಂದರ್ಭಗಳೊಂದಿಗೆ ಆ ಕಾರ್ಯಕರ್ತೆ ಏಗಬೇಕಿದೆ. ಹಲವುಸಲ ತುರ್ತಾಗಿ ಸ್ಥಳಾಂತರಿಸಲು ಅವಕಾಶವೇ ಇಲ್ಲದಂಥ ಜಾಗಕ್ಕೆ ರೋಗಿಯನ್ನು ಒಯ್ಯುವಂತೆ ಸೂಚಿಸುವುದೂ ಉಂಟು. ಉತ್ತರಪ್ರದೇಶ ರಾಜ್ಯ ಒಂದರಲ್ಲೇ 583 ಸಮುದಾಯ ಆರೋಗ್ಯಕೇಂದ್ರಗಳ ಕೊರತೆ ಇದೆ. ಇರುವಂಥ ಆರೋಗ್ಯಕೇಂದ್ರಗಳಲ್ಲೂ 1/2 ಭಾಗಕ್ಕಿಂತ ಕಡಿಮೆ ಕೇಂದ್ರಗಳಲ್ಲಿ ಮಾತ್ರ ಪೂರ್ಣಾವಧಿ ಪ್ರಸೂತಿ ಹಾಗೂ ಸ್ತ್ರೀರೋಗ ತಜ್ಞರಿದ್ದಾರೆ. 45% ಕೇಂದ್ರಗಳಲ್ಲಿ ಒಂದು ಆಂಬ್ಯುಲೆನ್ಸ್ ವ್ಯಾನ್‌ಅನ್ನು ನಡೆಸಲಿಕ್ಕೂ ಹಣವಿಲ್ಲ. ಸಮುದಾಯ ಆರೋಗ್ಯ ಕೇಂದ್ರಗಳಲ್ಲಿರುವ ಬಹಳಷ್ಟು ಉದ್ಯೋಗಿಗಳು, ಸಂಶೋಧಕರಿಗೆ ಕೇವಲ "normal" ಹೆರಿಗೆಗಳನ್ನು ಕುರಿತಂತೆ ಕೆಲಸಮಾಡಲು ಸೂಚಿಸಲಾಗುತ್ತದೆ. ಕಷ್ಟಕರವಾದ ಹೆರಿಗೆಗಳನ್ನು ನಿಭಾಯಿಸಲು ತಮ್ಮಲ್ಲಿ ಯಾಂತ್ರಿಕ ಉಪಕರಣಗಳಿಲ್ಲ ಎಂಬುದರ ಸೂಚನೆ ಇದಾಗಿರುತ್ತದೆ. ಕೆಲವೊಮ್ಮೆ ಯಾರಾದರೂ ಗರ್ಭಿಣಿ ಮಹಿಳೆಯರಿಗೆ ವಿಶೇಷ ರಕ್ಷಣೆ ಬೇಕೆಂದು ಸಲಹೆ ಕೊಡಬೇಕೆಂದು ಅವರಿಗೆ ಸೂಚಿಸಲಾಗುವ ಕೇಂದ್ರಗಳು, ರಕ್ತಬದಲಾವಣೆ ಮುಂತಾದ ಸೌಕರ್ಯಗಳು ಇರುವಂಥವು, ನೂರು ಕಿಲೋಮೀಟರ್‌ಗಳಿಗಿಂತಲೂ ದೂರದಲ್ಲಿರುತ್ತವೆ. ಸಕಾಲಕ್ಕೆ ಬೇಕಾದ ನಿಗಾವಣೆ ದೊರೆಯದಿರುವುದರಿಂದ ಜೀವಕ್ಕೇ ಅಪಾಯವುಂಟಾಗುತ್ತದೆ ಎಂದು MMR ವರದಿ ತಿಳಿಸುತ್ತದೆ:

"ಹೆರಿಗೆ ಆದ ಮೊದಲ 24 ರಿಂದ 72 ಗಂಟೆಗಳಲ್ಲಿ ಅವಶ್ಯಕವಾಗಿ ಆ ಹೊಸತಾಯಿಗೆ ನೀಡಲೇಬೇಕಾದ ಚಿಕಿತ್ಸೆಗಳನ್ನು ಮತ್ತು ಪ್ರಯಾಸದ ಹೆರಿಗೆ ಸಂದರ್ಭದಲ್ಲಿ ರಕ್ಷಕ ಚಿಕಿತ್ಸೆಯ ಸೂಕ್ತ ಮುಂದುವರಿಕೆಯನ್ನು ಒದಗಿಸದಿದ್ದ ಪಕ್ಷದಲ್ಲಿ ಎಷ್ಟೇ ಒಪ್ಪವಾದ ಸಾಂಸ್ಥಿಕ ಆರೋಗ್ಯ ಕೇಂದ್ರವೂ ಆ ಗರ್ಭಿಣಿ/ತಾಯಿಯ ಪ್ರಾಣ ಕಾಪಾಡಲಾರದು" ಎನ್ನುತ್ತದೆ ಆ ವರದಿ.

2008ರಲ್ಲಿ ನಡೆಸಲಾದ ಸರ್ಕಾರಿ ಸಮೀಕ್ಷೆಯು ತೋರಿಸುವಂತೆ ಹೆರಿಗೆಯಾದ ಮೊದಲ 48 ಗಂಟೆಗಳಲ್ಲಿ ನೀಡಬೇಕಾದ ಚಿಕಿತ್ಸೆ, ನಿಗಾವಣೆ ಪ್ರಮಾಣ ಕೂಡ ಕುಸಿದಿದೆ.


ಆಸ್ಪತ್ರೆಗಳಲ್ಲಿ ತಾಯಿಯರ ದುಸ್ಥಿತಿ....

### ತಾರತಮ್ಯ ಭಾವ

ಸರ್ಕಾರಿ ಆರೋಗ್ಯರಕ್ಷಣಾ ವ್ಯವಸ್ಥೆಗಳು ಬೇಕಾದಷ್ಟು ಉಚಿತ ಸೇವೆಗಳನ್ನು ಒದಗಿಸುವ ಭರವಸೆ ನೀಡುತ್ತವೆ. ಆದರೆ ಈ ವ್ಯವಸ್ಥೆಯೊಳಗೇ ತಾರತಮ್ಯ ಭಾವವು ಬೆಸೆದುಕೊಂಡಿದೆ. "ಜನನೀ ಸುರಕ್ಷಾ ಯೋಜನೆ" ಎಂಬುದು ತಾಯ್ಮರಣ ಸಂಖ್ಯೆಯನ್ನು ನಿಯಂತ್ರಿಸುವ ಹಾಗೂ ತಾಯಿಯರ ಆರೋಗ್ಯ ಹೆಚ್ಚಿಸುವ ಉದ್ದೇಶ ದಿಂದ ಆಸ್ಪತ್ರೆಗಳಲ್ಲೇ ಹೆರಿಗೆಮಾಡಿಸಿಕೊಳ್ಳುವುದನ್ನು ಪ್ರೋತ್ಸಾಹಿಸಲೆಂದು ಹುಟ್ಟುಹಾಕಿದ ಯೋಜನೆ. ಆದರೆ 19 ವರ್ಷಕ್ಕಿಂತ ಕೆಳಗಿನ ಗರ್ಭಿಣಿ ಹುಡುಗಿಯರಿಗೆ ಅಥವಾ ಮೊದಲೇ ಎರಡು ಮಕ್ಕಳಿದ್ದು ಮೂರನೆಯ ಹೆರಿಗೆಗೆ ಬರುವವರಿಗೆ ಈ ಯೋಜನೆಯ ಪ್ರಯೋಜನ ಎಷ್ಟೋ ರಾಜ್ಯಗಳಲ್ಲಿ ಲಭ್ಯವೇ ಇಲ್ಲ. ತಾಯ್ಮರಣಗಳನ್ನು ನಿಯಂತ್ರಿಸಬಲ್ಲ ಸೂಕ್ತವಾದ ವ್ಯವಸ್ಥೆಯೊಂದು ಇದ್ದರೆ ಮಾತ್ರ ಈ ತೊಂದರೆಗಳನ್ನು ಸರಿಪಡಿಸಬಹುದು. ಉತ್ತರಪ್ರದೇಶದಲ್ಲಿರುವ ಅನೇಕ ತೊಂದರೆಗಳಲ್ಲಿ ಒಂದೆಂದರೆ ತಾಯ್ಮರಣಗಳು, ಗಾಯಾಳುಗಳು ಎಲ್ಲಿ, ಯಾವಾಗ ಹಾಗೂ ಏಕೆ ಆದವು ಎಂಬ ಮಾಹಿತಿಗಳು ಜಿಲ್ಲಾ ಮಟ್ಟದಿಂದ ಮೇಲಕ್ಕೆ ತಲುಪದೇ ಇರುವುದು. ಈ ಬಗ್ಗೆ ದೂರುಗಳ ದಾಖಲಾತಿ ಗಳಾಗಲೀ, ಅವುಗಳ ಪರಿಹಾರ ಕಾರ್ಯಗಳ ವಿಧಾನಗಳಾಗಲಿ, ಕನಿಷ್ಠ ತುರ್ತು ಪ್ರತಿಸ್ಪಂದನ ವ್ಯವಸ್ಥೆಗಳಾಗಲಿ ಅಲ್ಲಿ ಇಲ್ಲ. ಸಾಂಸ್ಥಿಕ ಹೆರಿಗೆ ಗಳಲ್ಲೂ ಹೆರಿಗೆ ನಂತರದ ಅವಧಿಯಲ್ಲಿ ಏನೂ ಗಾಯಗಳಿಲ್ಲದೆ ತಾಯಿ ಕ್ಷೇಮವಾಗಿ ಉಳಿದಿದ್ದಳೆ? ಯಾವುದೇ ಅಂಗವೈಕಲ್ಯ ಅಥವಾ ಸೋಂಕು ತಗುಲದೆ ಇದ್ದಳೆ ಎಂಬುದನ್ನು ದಾಖಲಿಸುವುದನ್ನು ಮುಂದುವರೆಸಿರುವುದಿಲ್ಲ.

### ನಾಗರಿಕ ನೋಂದಣಿ ವ್ಯವಸ್ಥೆ

ಈ ಮಹಿಳೆಯರಿಗೆ ಯಾವ ರೀತಿಯ ಆರೋಗ್ಯ ರಕ್ಷಣೆ ದೊರೆಯುತ್ತದೆ ಎಂಬ ಬಗ್ಗೆ ಯಾವ ಮಾಹಿತಿಯೂ ಸಿಗುವುದಿಲ್ಲ. ರಾಜ್ಯದಲ್ಲಿ ಆಗುವ ತಾಯ್ಮರಣಗಳ ಸಮಗ್ರ ದಾಖಲಾತಿ ಕೂಡ ಅಲ್ಲಿ ಇಲ್ಲ. ಹೆರಿಗೆಗೆ ಇಲ್ಲವೆ ಗರ್ಭ ಧಾರಣೆಯ ಸಂಬಂಧದಲ್ಲಿ ಆಗುವ ಮರಣಗಳನ್ನು ದಾಖಲಿಸುವಂತೆ ಆರೋಗ್ಯ ಕಾರ್ಯಕರ್ತೆಯರಿಗೆ ತಿಳಿಸಲಾಗುತ್ತದೆ. ಹೆರಿಗೆಯಾದ ನಂತರ ಆರರಿಂದ ಎಂಟು ಗಂಟೆಗಳ ಒಳಗೆ ಅವರು ಈ ವರದಿಯನ್ನು ದಾಖಲಿಸಿರಬೇಕು. ಆದರೆ ಆ

ಅವಧಿಯನಂತರದ ಯಾವ ಮಾಹಿತಿಯೂ ದೊರೆಯದು. ಇದಕ್ಕೆ ವೈದೃಶ್ಯ ಎಂಬಂತೆ MMR ವರದಿ ತಿಳಿಸುವಂತೆ, ತಮಿಳುನಾಡಿನಲ್ಲಿ ತಾಯ್ಮರಣದ ವಿಷಯವಾಗಿ ಜನಜಾಗೃತಿ ಕ್ಯಾಂಪುಗಳನ್ನು ನಡೆಸಲಾಗುತ್ತದೆ. ಕುಟುಂಬದ ಸದಸ್ಯರು, ಆರೋಗ್ಯ ಕಾರ್ಯಕರ್ತರೂ ಒಳಗೊಂಡ ಹಾಗೆ ವಿವಿಧ ಮೂಲಗಳಿಂದ ಮಾಹಿತಿ ಪಡೆದುಕೊಳ್ಳಲು ಅಧಿಕಾರಿಗಳು ಪ್ರೋತ್ಸಾಹಿಸುತ್ತಾರೆ. ಸಾವಿನ ಕಾರಣಗಳೇನೇ ಆಗಿರಲಿ, ಎಲ್ಲ ಗರ್ಭಿಣಿ ಹೆಂಗಸರ ಮರಣಗಳನ್ನು ವರದಿ ಮಾಡಲು ಕೋರಲಾಗುತ್ತದೆ. ಈ ರೀತಿ ವರದಿ ಮಾಡುವುದರ ಮಹತ್ವವನ್ನು ಆರೋಗ್ಯ ಕಾರ್ಯಕರ್ತರಿಗೆ ಮುಖ್ಯವಾಗಿ ಮನದಟ್ಟು ಮಾಡಿಕೊಡ ಲಾಗುತ್ತದೆ. MMR ವರದಿಯು ಜನನ ಮರಣಗಳ ಕರಾರುವಾಕ್ಕಾದ ದಾಖಲಾತಿಯನ್ನು ಮರಣದ ಕಾರಣಗಳ ಸಮೇತವಾಗಿ ಪ್ರಬಲವಾಗಿ ನೋಂದಾಯಿಸುವಂಥ ವ್ಯವಸ್ಥೆ ಏರ್ಪಡಬೇಕೆಂದು ಆಗ್ರಹ ಪಡಿಸುತ್ತದೆ. ಇಡೀ ದೇಶದಲ್ಲಿ ಉತ್ತರಪ್ರದೇಶದ ನೋಂದಣಿ ವ್ಯವಸ್ಥೆ ಅತ್ಯಂತ ಹೀನವಾದದ್ದೆಂದು ಆ ವರದಿ ತಿಳಿಸುತ್ತದೆ.

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಮಿಷನ್‌ನ ಮುಖಾಂತರ ಆಸ್ಪತ್ರೆ-ಹೆರಿಗೆಗಾಗಿ ಪ್ರೋತ್ಸಾಹಿಸಲು ಸರ್ಕಾರವು ಯತ್ನಿಸುತ್ತಿದೆ. ತಾಯ್ಮರಣವನ್ನು ನಿಯಂತ್ರಿಸಲು ಈ ಕ್ರಮ ಉದ್ದೇಶಿಸಿದ್ದರೂ ಆರೋಗ್ಯ ಕಾರ್ಯಕರ್ತರು ಈ ಬಗ್ಗೆ ಅನುಮಾನ ವ್ಯಕ್ತಪಡಿಸುತ್ತಾರೆ. ಆರೋಗ್ಯವ್ಯವಸ್ಥೆಯ 'ವಾಸ್ತುಶಿಲ್ಪದ ಸುಧಾರಣೆ'ಯ ಜೊತೆಯಲ್ಲಿ ತಾಯ್ಮರಣದ ಸಂದರ್ಭಗಳನ್ನು ತನಿಖೆಗೆ ಒಳಗು ಮಾಡಬಲ್ಲ ವ್ಯವಸ್ಥೆಯನ್ನು ಸಂಸ್ಥೀಕರಿಸಬೇಕು ಎಂದು ಅವರು ಹೇಳುತ್ತಾರೆ. ಗರ್ಭಧಾರಣೆ ಮತ್ತು ತತ್ಸಂಬಂಧಿತ ತೊಂದರೆಗಳ ಬಗ್ಗೆ ಸಂವೇದನಾಶೀಲವಾಗಿ ತೊಡಗುವುದೂ ಅವಶ್ಯಕವಿದೆ.

ಸರ್ಕಾರಿ ಆರೋಗ್ಯ ಸೌಕರ್ಯಗಳನ್ನು ಪಡೆದ ಬಡ ದುರ್ಬಲ ಮಹಿಳೆಯರು ಅನೇಕ ಸಲ ಡಾಕ್ಟರುಗಳು, ನರ್ಸುಗಳ ಬೈಗುಳದ ಹೆದರಿಕೆಯಿಂದಾಗಿ ತಮಗೆ ಸೌಕರ್ಯಗಳ ಕೊರತೆ/ಅಲಭ್ಯತೆಯಿರುವುದರ ಬಗ್ಗೆ ದೂರನ್ನು ನೀಡುವುದಿಲ್ಲ. ತಾಯ್ಮರಣಗಳನ್ನು ಬಹಳ ಸಲ ತಡೆಗಟ್ಟಲು ಸಾಧ್ಯವಿರುತ್ತದೆ. ನಿಜವಾಗಿ ಬೇಕಾಗಿರುವುದು ಆರೋಗ್ಯ ಸಂರಕ್ಷಣೆ ಕುರಿತಂತೆ ಒಂದು ಸಮಗ್ರವಾದ ಕಾರ್ಯರೂಪ. ಇದು ಕೇವಲ ವೈದ್ಯಕೀಯ ವಿಷಯಕ್ಕೆ ಸೀಮಿತವಾದದ್ದಾಗದೆ ಮಹಿಳೆಯರ ಪೌಷ್ಟಿಕತೆ ಅವಶ್ಯಕತೆಗಳನ್ನೂ ಸಂಬೋಧಿಸುವಂತಿರಬೇಕು.

**ಮರಣಗಳನ್ನು ತಡೆಗಟ್ಟಬಹುದು**

ತಾಯ್ಮರಣಗಳಲ್ಲಿ 65% ಕೇಸುಗಳು ಪ್ರಸೂತಿ ಕಾರಣಗಳಿಂದಲೇ ನೇರವಾಗಿ ಸಂಭವಿಸಿರುವಂಥವಾಗಿರುತ್ತವೆ. ಅಧಿಕ ರಕ್ತಸ್ರಾವ, ಸೋಂಕು ಕೀವು ಉಂಟಾಗುವಿಕೆ ಹಾಗೂ ಸುರಕ್ಷಿತವಲ್ಲದ ಗರ್ಭಪಾತ ಇತ್ಯಾದಿ. ಕ್ಷಯ, ವೈರಲ್ ಹೆಪಟೈಟಿಸ್, ಅನಿಮಿಯಾ, ಮಲೇರಿಯಾಗಳಂಥ ಸೋಂಕು ರೋಗಗಳಿಂದಲೂ ತಾಯ್ಮರಣಗಳು ಸಂಭವಿಸಬಹುದು. ಜಾಗತಿಕ ಸರಾಸರಿ ಪ್ರಮಾಣಕ್ಕಿಂತ ಭಾರತದಲ್ಲಿ ಇಂತಹ ಸಾವುಗಳು ತುಂಬ ಅಧಿಕವಾಗಿವೆ.

ಬಡವರ್ಗಗಳ ಮಹಿಳೆಯರ ವಿಷಯದಲ್ಲಿ ಇಂತಹ ಸಮಸ್ಯೆಗಳು ಮತ್ತಷ್ಟು ಸಂಕೀರ್ಣ ಸಂಕಷ್ಟಗಳನ್ನು ಹೊಂದಿರುತ್ತವೆ. ಆರೋಗ್ಯಕರ ಆಹಾರದ ಕೊರತೆ ಹಾಗೂ ಅಗ್ಗದ ವೈದ್ಯಕ್ಕೆ ಮೊರೆಹೋಗುವುದು ಮುಂತಾದವು ಅವರ ಸಾವಿಗೆ ಕಾರಣಗಳಾಗುತ್ತವೆ. ಈ ಬಗೆಯ ಕಾರಣಗಳ ವ್ಯವಸ್ಥಿತ ತನಿಖೆಗಳಿಂದ ಸಾಂಸ್ಥಿಕವಾದ ಪ್ರತಿಸ್ಪಂದನೆಯನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ. ಸಮರ್ಪಕ ಆರೋಗ್ಯ ಸೇವೆಗಳೂ ಪೌಷ್ಟಿಕತೆಗಳೂ ಗೈರು ಹಾಜರಿರುವ ಸಂದರ್ಭದಲ್ಲಿ ತಾಯ್ಮರಣಗಳ ಸಂಖ್ಯೆಯನ್ನು ಕುಗ್ಗಿಸಬೇಕು ಎಂಬುದು ಹೆಚ್ಚೇನೂ ಅರ್ಥಪೂರ್ಣ ವಾಗಲಾರದು.

*['Front Line' ಮಾಸ ಪತ್ರಿಕೆಯ ನವೆಂಬರ್ 20, 2009ರ ಸಂಚಿಕೆಯಲ್ಲಿ ಪ್ರಕಟವಾದ ಟಿ.ಕೆ. ರಾಜಲಕ್ಷ್ಮಿ ಅವರ 'Maternal Ttagedies' ಲೇಖನವನ್ನು ಆಧರಿಸಿದೆ.]*

❑

ಸ್ತ್ರೀವಾದದ ಅತಿರೇಕದ ನಿಲುವುಗಳನ್ನು ಕಮಲಾದಾಸ್ ತಿರಸ್ಕರಿಸುತ್ತಿದ್ದರು. ಏಕೆಂದರೆ ಪುರುಷರೆ ಇಲ್ಲದ ಜಗತ್ತನ್ನು ಕಲ್ಪಿಸಿಕೊಳ್ಳುವುದಾಗಲಿ ಅಥವಾ ಪುರುಷಾಧಿಪತ್ಯವನ್ನು ಬುಡಮೇಲು ಮಾಡಿ ಅಲ್ಲಿ ಸ್ತ್ರೀರಾಜ್ಯ ಸ್ಥಾಪಿಸಿದರೆ ಸಮಾನತೆಯ ಲೋಕ ಸೃಷ್ಟಿಯಾದೀತು ಎಂದು ನಂಬುವುದಾಗಲಿ ಆಕೆಗೆ ಸಾಧ್ಯವೇ ಇದ್ದಿಲ್ಲ. ತನ್ನನ್ನೂ ಸೇರಿಸಿಕೊಂಡಂತೆ ಯಾರೊಬ್ಬರ ಮೇಲೂ ಯಾಜಮಾನ್ಯ ಹೊಂದಿರುವ ಇಚ್ಛೆ ಅವರಿಗೆ ಎಷ್ಟೂ ಇರಲಿಲ್ಲ. ಹೆಣ್ಣಾಗಿ ತನ್ನ ಭಿನ್ನತೆಯ ತೀವ್ರ ಅರಿವು ಆಕೆಗಿತ್ತು. ಆದರೆ ಅದನ್ನು ವೈಭವೀಕರಿಸದೆ ತೀರ ಸಹಜವೆಂದು ಆಕೆ ಕಾಣುತ್ತಿದ್ದರು.

ಕೃಷ್ಣನ ಮೊದಲ ಆಲಿಂಗನದಲ್ಲೇ ಕರಗಿ ಹೋಗುವಂತಾದಾಗ ಆತಂಕದಿಂದ ಕಮಲಾದಾಸ್ ಅವರ ರಾಧೆ ಹೇಳುತ್ತಾಳೆ.:

*ನಿನ್ನ ದೇಹ ನನಗೆ ಸೆರೆ*
*ಅದರಾಚೆಗೆ ಹರಿಯದು ಕಣ್ಣು*
*ನಿನ್ನ ಮೈಯ ಕಪ್ಪು ಬಿಗಿದಿಟ್ಟಿದೆ ನನ್ನ*
*ನಿನ್ನೊಲವಿನ ನುಡಿ ಜಾಣ ಜಗದ ಪದಗಳ*
*ಗದ್ದಲದ ಬಾಯಿ ಮುಚ್ಚಿಸಿದೆ.*
*ಖೈದಿ ತನ್ನ ಹಿಡಿದಿಟ್ಟ*
*ಜೈಲಿನ ಭೂಪಟ ಅಭ್ಯಸಿಸುವಂತೆ ನಾ*
*ನಿನ್ನ ದೇಹದ ತಡೆ-ಕಟ್ಟುಗಳ ಶೋಧಿಸುವೆ*
*ಸಲ್ಲ, ಏಕೆಂದರೆ, ನಾನು*
*ಒಂದು ದಿನ ಅದರ ಹುರಿಯ ಗುಣಿಕೆಯಿಂದ*
*ಪಾರಾಗಬೇಕು.*

***-ಕೆ. ಸಚ್ಚಿದಾನಂದನ್***




# ಲೋಹದ ಕಣ್ಣಿನ ಬಿಡಿನೋಟಗಳು

● *ಸ. ಉಷಾ*

ಅಮೃತಮತಿಯ ಸ್ವಗತ ಮತ್ತು ಗಾಜುಗೋಳ ಎಂಬ ಎರಡು ಸಂಕಲನಗಳಿಂದ ಸಾಹಿತ್ಯಾಸಕ್ತರ ಮೆಚ್ಚುಗೆ ಮತ್ತು ಗೌರವಕ್ಕೆ ಪಾತ್ರರಾಗಿದ್ದ ಕವಿ, ವಿಮರ್ಶಕಿ, ರಂಗಕರ್ಮಿ, ನಾಟಕಕರ್ತೃ ಹೆಚ್.ಎಲ್. ಪುಷ್ಪರ ಕವಿತೆಗೆ ಈಗ ಲೋಹದ ಕಣ್ಣೊಂದು ಮೂಡಿದೆ.

ಪುಷ್ಪ ಈ ಹಿಂದೆ ಕಾವ್ಯವೆಂಬ ಪ್ರಕಾರವನ್ನು ತುಂಬ ಶ್ರದ್ಧೆಯಿಂದ ಕೃಷಿ ಮಾಡಿದ್ದಾರೆ. ಅವರ ಕವಿತೆಯ ಪ್ರೇರಣೆಗಳು ಇತಿಹಾಸ ಪುರಾಣ ಸಾಮಾಜಿಕತೆಗಳಲ್ಲಿ ಇವೆ. ವಚನಗಳ ಭಾಷೆಗೆ ಪುಷ್ಪ ಒಲಿದಿದ್ದಾರೆ.

ಈ ಸಂಕಲನದಲ್ಲೂ ರಾಧೆಶ್ಯಾಮರ ಪ್ರೇಮ, ರಕ್ತದೋಕುಳಿಯ ನಡುವೆ ರಸಹೀನ ಫಲದಂತೆ ತೂಗುವ ಏಸು, ಬಣ್ಣಗೆಡದ ಅರಮನೆಗಳು, ಉಸಿರಿಲ್ಲದ ಸೆರೆಮನೆಗಳು ಪುಷ್ಪಕಾವ್ಯದ ವಸ್ತುಗಳಾಗಿವೆ.

ಕವಿತೆಯ ಒಂದು ಸಾರ್ವಕಾಲೀನ ಸಂಕಟವೆಂದರೆ ಎಲ್ಲ ನಂಬಿಕೆಗಳಿಗೆ, ಗೃಹೀತಗಳಿಗೆ ಸವಾಲಾಗುವ ವಾಸ್ತವ ಸ್ಥಿತಿ. ಅಂಥ ಸ್ಥಿತಿಯನ್ನು ಪುಷ್ಪರ ಕವಿತೆ ರೂಪಕಾತ್ಮಕವಾಗಿ ಗುರ್ತಿಸಿದೆ.

*ಎಷ್ಟೋ ವರ್ಷದ ಈ ಸೀರೆ*
*ಜೂಲು ಜೂಲಾಗುತ್ತಿದೆ.*
*ನಂಬಿಕೆ ಅಪನಂಬಿಕೆಗಳ*
*ತಾಕಲಾಟದಲ್ಲಿ ಮತ್ತಷ್ಟು*
*ಪಿಂಜಿ ಪಿಂಜಿ ಹೋಗುತ್ತಿದೆ.*
*(ಕುಣಿವ ನವಿಲುಗಳು)*

ತಾನು ನಂಬಿದ ವ್ಯವಸ್ಥೆಯೂ ಮೌಲ್ಯಗಳೂ ವೇಗವಾಗಿ ಬದಲಾಗುತ್ತಿರುವಾಗ ಕವಿತೆ ಆರ್ತವಾಗುತ್ತದೆ.

*ಅಪ್ಪಳಿಸುವ ಅಲೆಯೆದುರು*
*ವಿಳಾಸವಿಲ್ಲದ ನಾನು ತಬ್ಬಿಬ್ಬಾಗಿದ್ದೇನೆ*
*ಮಗಳು ಹೆಂಡತಿ ತಾಯಿ ನಾನಲ್ಲ ಶಿವನೇ*
*ಕಳೆದುಹೋಗಲಿಕ್ಕೆಂದೇ ಬಂದ*
*ಮಾರ್ದನಿಯಿಲ್ಲದ ಪುಟ್ಟಹಕ್ಕಿ*
*(ಉಗಾದಿಯ ಪುಟ್ಟಹಕ್ಕಿ ಹಾಗೂ ಒಗರು)*

ರಾಧೆಯ ಆಧ್ಯಾತ್ಮ, ಕೃಷ್ಣನ ಪ್ರೀತಿ, ಗುರುವಿನ ಕರುಣೆ, ಕಂಬಾಲಪಲ್ಲಿಯಲ್ಲಿ ಸುಟ್ಟ ನರಮಾಂಸದ ವಾಸನೆ ಈ ಎಲ್ಲ ವಿಷಯಗಳ ಜೊತೆಗೆ ಈ ಸಂಕಲನದಲ್ಲಿರುವ ಕುಂಡಲಕೇಶಿ ಎಂಬ ಪುಟ್ಟ ಕವಿತೆ ನನಗೆ ಮಹತ್ವದ್ದೆನ್ನಿಸುತ್ತದೆ. ಅರ್ಥಮೂಲ ಜಗತ್ತು ಹೆಣ್ಣನ್ನೂ ಪ್ರೀತಿ ಪ್ರೇಮಗಳನ್ನೂ ವೈಯಕ್ತಿಕ ಸಂಬಂಧಗಳನ್ನೂ ಅಳೆಯುವ ರೀತಿಗೆ ಈ ಕಥೆಯೊಂದು ನಿದರ್ಶನ. ಇದು ಕವಿತೆ ಬರೆಯದ ಅನೇಕ ಹುಡುಗಿಯರ ಕವಿತೆ – ಸಾಮಾಜಿಕವಾಗಿ ಇಂದಿಗೂ ಪ್ರಸ್ತುತ.

ಬುಷ್, ಒಬಾಮ, ಮಿಷೆಲ್, ಗುಲಾಬಿಗಳು, ಕರುಳಿಲ್ಲದ ಹೊಟ್ಟೆಯಿಂದ ಇಣುಕುವ ಕತ್ತಿ ಇದೆಲ್ಲದರ ಹಿಂದೆ ಬುದ್ಧನ ಕಾಲದ ಕಳ್ಳಿನಕಣ್ಣು ಕುಂಡಲಕೇಶಿಯ ಒಡವೆಗಳು ಇವೆ.

ಹೀಗೆ ಬಿಡಿಬಿಡಿಯಾಗಿ ಚದುರಿ ಹೋಗಿರುವ ಹಲವು ಆಶಯಗಳನ್ನು ಲೋಹದ ಕಣ್ಣು ಕಂಡಿದೆ. ವಿಷಯದ ದೃಷ್ಟಿಯಿಂದ ಇಷ್ಟು ಸೊಗಸಾದ ಆಶಯಗಳನ್ನು ಹೊತ್ತ ಪುಷ್ಪರ ಕವಿತೆಗಳು ರೂಪ ಮತ್ತು ಬಂಧಗಳಲ್ಲಿ ಬಡವಾಗಿವೆ. ಇದು ಪುಷ್ಪಾಗೆ ತಿಳಿದಿಲ್ಲವೆಂದೇನಲ್ಲ. ಇಲ್ಲಿನ ಕೆಲವು ಕವಿತೆಗಳು ನಿಜಾರ್ಥದಲ್ಲಿ ಅರೆರೂಪು ತಳೆದ ಶಿಶುಗಳೇ ಆಗಿವೆ ಎಂದು ಅವರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಪುಷ್ಪರ ಮುಂದಿನ ಕಾವ್ಯ ಅಭಿರಾಮತರವಾದ ಅಶ್ರುತಗಾನವನ್ನು ಕೇಳಿಸಲೆಂದು ನಾನು ಕುತೂಹಲದಿಂದ ಕಾಯುತ್ತೇನೆ.

**ಲೋಹದ ಕಣ್ಣು**
ಲೇ: ಡಾ॥ ಎಚ್.ಎಲ್. ಪುಷ್ಪ
ಪು: 104, ಬೆಲೆ : ರೂ. 50/–
ಪ್ರ : ಲೋಹಿಯಾ ಪ್ರಕಾಶನ,
ಕ್ಷಿತಿಜ, ಕಪ್ಪಗಲ್ಲು ರಸ್ತೆ
ಗಾಂಧಿನರ
ಬಳ್ಳಾರಿ–583 103



## *ಕುಂಡಲಕೇಶಿ (ಆಯ್ದ ಭಾಗ)*

*ಕುಂಡಲಕೇಶಿ, ಯಾರಿಟ್ಟರು ಈ ಹೆಸರು*
*ಕತ್ತರಿಸಿ ಒಗೆದರೂ, ಇದರಾಳದ*
*ಸುಳಿ ಬೋಳಿಸಿದರೂ ಹೋಗದು*
*ಮುರುಟಿದ ಈ ಗುಂಗುರು ಕೂದಲು.*

*ಹರಕೆ ತೀರಿಸಲೆಂದು ಸಾಗಿದೆವು ನಾವು*
*ಅಲ್ಲಿ ಮೇಲೆ ಆ ಬೆಟ್ಟದಾ ತುದಿಯೆಡೆಗೆ*
*ಸ್ಪಷ್ಟ ದಾರಿಯಲ್ಲಿ ಅಸ್ಪಷ್ಟ ಕರಿ ನೆರಳು*
*ಕೊಲುವ ಕಟುಕನ ಮುಂದೆ ಕೂಗಿತ್ತು ಪ್ರೇಮ*
*ರೆಕ್ಕೆ ಪುಕ್ಕ ಕಳಕೊಂಡು ತಬ್ಬಿಬ್ಬಾಗಿತ್ತು*

*ಕಳ್ಳನೊಳಗಿನ ಕಳ್ಳ ಚಾಚುತ್ತಾ ಕೈ*
*ಅವನ ಕಣ್ಣೊಳೊಗಡಗಿದೆಯೇನು ನನ್ನ ಸಾವು*
*ಚುಂಬಿಸಿದೆ ಬಲು ನಿಧಾನ*
*ನನ್ನೆಲ್ಲಾ ಒಲವ ಮರಳಿ ಪಡೆವಂತೆ*
*ತಳ್ಳಿದೆ, ತೀರ ಸಲೀಸಾಗಿ ಪ್ರಪಾತದೆಡೆಗೆ*
*ಕೊಲಲಿದ್ದ ಸಾವ ನಾನೇ ಕೊಂದೆ*

# ಸ್ತ್ರೀ ದೃಷ್ಟಿಯ ಅನನ್ಯ ಮಾದರಿ ಪ್ರಿಯಾ ತೆಂಡೂಲ್ಕರ್ ಕಥೆಗಳು

● ಡಾ. ಸುಮಿತ್ರಾ .ಎಲ್ ಸಿ

ಗೌರಿದೇಶಪಾಂಡೆ, ಕಮಲದೇಸಾಯಿ, ಮಾಧವಿ ದೇಸಾಯಿ, ಮೇಘನಾಪೇಟೆ ಮೊದಲಾದ ಮುಖ್ಯ ಲೇಖಕಿಯರನ್ನು ಚಂದ್ರಕಾಂತ ಪೋಕಳೆ ಅವರು ಈಗಾಗಲೇ ಕನ್ನಡಕ್ಕೆ ತಂದಿದ್ದಾರೆ. 'ಪ್ರಿಯಾ ತೆಂಡೂಲ್ಕರ್ ಕಥೆಗಳು' ಹಲವುಕಾರಣಗಳಿಂದ ಗಮನ ಸೆಳೆಯುತ್ತವೆ. ಸ್ತ್ರೀಪರ ದೃಷ್ಟಿಯ ಅನೇಕ ಲೇಖಕಿಯರು ತಮ್ಮ ಕಥೆ, ಕವಿತೆಗಳಲ್ಲಿ ತಮ್ಮನ್ನು ಸಮರ್ಥಿಸಿ ಕೊಳ್ಳುತ್ತಾ ತಮ್ಮ ನೋವಿಗೆ ನಿರಾಶೆಗೆ ಇನ್ನಾರೋ ಕಾರಣರೆಂದು ದೂಷಿಸುತ್ತಾ ಬರೆಯುವುದನ್ನು ನೋಡುತ್ತೇವೆ. ಪ್ರಿಯಾ ಅವರ ಕಥೆಗಳ ವೈಶಿಷ್ಟ್ಯವಿರುವುದು ಈ ಕಥೆಗಳ ಕೇಂದ್ರದಲ್ಲಿರುವ ಸ್ತ್ರೀ ಆತ್ಮವಿಮರ್ಶೆ ಮಾಡಿಕೊಳ್ಳುವುದರಲ್ಲಿ. ಕುಟುಂಬದ ಒಳ ಮತ್ತು ಹೊರಗಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ, ಸೂಕ್ಷ್ಮ ಮತ್ತು ಸ್ವತಂತ್ರ ಮನೋಭಾವದ ಹೆಣ್ಣು ಎದುರಿಸ ಬಹುದಾದ ಅನೇಕ ಸಮಸ್ಯೆಗಳು, ಸಂಘರ್ಷಗಳು ಪ್ರಿಯಾ ಅವರ ಕತೆಗಳ ಕೇಂದ್ರ. ನಟಿ, ಲೇಖಕಿ, ದೃಶ್ಯಮಾಧ್ಯಮದಲ್ಲಿ ಕೆಲಸ ಮಾಡುವ ಮಹಿಳೆ, ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡವಳು, ಹೀಗೆ ಪ್ರಿಯಾ ಬದುಕಿನ ಹಲವು ಆಯಾಮಗಳನ್ನು ಅನುಭವದ ಕಣ್ಣಿಂದ ಚಿತ್ರಿಸಬಲ್ಲವರು. ಇವುಗಳ ಜತೆಗೆ ವಿಷಮದಾಂಪತ್ಯದ ಅನುಭವವೂ ಸೇರಿ, ಪ್ರಿಯಾ ಅವರ ಕಥಾಜಗತ್ತಿನಲ್ಲಿ ನೋವು ಅನುಭವಿಸುವ ವಿಕ್ಷಿಪ್ತ ಮನಸ್ಥಿತಿಯ ಹೆಣ್ಣುಗಳೆ ತುಂಬಿದ್ದಾರೆ.

ವಿಷಮ ದಾಂಪತ್ಯಕ್ಕೆ ವಿಚ್ಛೇದನ ಪರಿಹಾರವಲ್ಲ ಎಂಬ ಸೂಕ್ಷ್ಮ ಸಂದೇಶ 'ಹೊಸ ಗಂಡಸು' ಕಥೆಯಲ್ಲಿದೆ.'ಹೊಸ ಗಂಡಸು'ಎಂಬ ಪರಿಭಾಷೆಯೇ ಪ್ರಿಯಾ ಅವರ ಭಾಷೆಯ ಗ್ರಹಿಕೆಯ ನಾವೀನ್ಯವನ್ನು ಸೂಚಿಸುವಂತಿದೆ. ಮಗುವಿರುವ ವಿಚ್ಛೇದಿತೆ ಮನೀಷ ಸುರೇಶನನ್ನು ಮದುವೆಯಾಗುವ ನಿರ್ಧಾರ ಮಾಡಿದಾಗ ಅವಳ ಸ್ವಂತಿಕೆಗೆ ಧಕ್ಕೆಯಾಗುವ ಸನ್ನಿವೇಶಗಳು ಎದುರಾಗುತ್ತವೆ. ಅಮೆರಿಕಾದಿಂದ ಬಂದ ಸುರೇಶನ ಅಕ್ಕನನ್ನು ಭೇಟಿಯಾಗಲು ಹೋದಾಗ "ಇವಳು ಏಕೈಕ ಸೋದರಿ ನಂದಾ, ನನ್ನ ಏಕೈಕ ಅಮ್ಮ, ಏಕೈಕ ಅಪ್ಪ" ಎಂದೆಲ್ಲ ಹೇಳಿದಾಗ, ಮನೀಷಾಗೆ ನೀನು ಮಾತ್ರ ನನ್ನ ಏಕೈಕ ಗಂಡನಲ್ಲ ಅನಿಸುತ್ತದೆ. ಗಂಡ್ಗೆ ಸುಲಭವಾಗುವ ಎರಡನೆ ಮದುವೆ ಹೆಣ್ಣಿಗೇಕೆ ಕಷ್ಟ ಎಂಬುದು ಇಲ್ಲಿ ಸೂಕ್ಷ್ಮವಾಗಿ ಚಿತ್ರಿತವಾಗಿದೆ. 'ಈ ವಯಸ್ಸಿನಲ್ಲಿ ಈ ಹೊಸ ಗಂಡಸು ಹೊಸ ರಾಜ್ಯದ ಆಟವಾಡುವುದು ತನ್ನಿಂದ ಸಾಧ್ಯವೇ?' ಎಂದು ಯೋಚಿಸುವ ಮನೀಷಾ ತೀವ್ರವಾಗಿ ಆತ್ಮವಿಮರ್ಶೆ ಮಾಡಿಕೊಳ್ಳುವವಳು. ತಪ್ಪೆಲ್ಲ ಗಂಡಿನದೇ ಅನ್ನುವವಳಲ್ಲ. 'ನಾನು ಒಳ್ಳೆಯವಳಲ್ಲ... ತುಂಬಾ ಹಠವಾದಿ, ಸ್ವಾರ್ಥಿ, ಕೊಳಕು, ಸಂಶಯದ ಸ್ವಭಾವದವಳು, ಹೊಂದಾಣಿಕೆ ಯಂತೂ ಮಾಡಿಕೊಳ್ಳುವವಳಲ್ಲ. ಹಿಂದೆಯೂ ಹೀಗಾಗಿಯೇ ನನ್ನ ಮದುವೆ ಮುರಿದು ಬಿತ್ತು' ಎಂದು ಕಿರುಚಿ ಹೇಳಬೇಕೆನಿಸುತ್ತದೆ ಆಕೆಗೆ. ಮತ್ತೆ ಹೊಂದಾಣಿಕೆ ಮಾಡಿಕೊಳ್ಳುವ, ಸ್ವಾತಂತ್ರ್ಯಹರಣದ ಎರಡನೆ ಮದುವೆ ಬೇಡವೆನಿಸುತ್ತದೆ ಆಕೆಗೆ.

'ಅವಳ ಮದುವೆಯ ಶ್ರದ್ಧಾಂಜಲಿಯ ರಾತ್ರಿ' ಗಂಡನ ಅನೈತಿಕತೆ ಬೇಜವಾಬ್ದಾರಿಗಳಿಂದಾಗಿ ನೋವು ಅನುಭವಿಸುವ ಹೆಣ್ಣಿನ ಕತೆ. 'ಲಫಡಾ' ಕಥೆಯಲ್ಲಿ ಆತ್ಮವಂಚನೆ ಮಾಡಿಕೊಳ್ಳುವ ಗಂಡ, ಸರಳ ಸಾತ್ವಿಕ ಸ್ವಭಾವದ ಹೆಂಡತಿಯನ್ನು ಸಂಶಯಿಸುವ ಚಿತ್ರ ಪರಿಣಾಮಕಾರಿಯಾಗಿದೆ. ಗಂಡನ ನಡತೆಯಿಂದ ನೋವು ಅನುಭವಿಸುವ ಹೆಂಡತಿ ಮನೆಯ, ಮನದ ಏಕತಾನತೆಯಿಂದ ಹೊರಬರಲು ಮನೆಯಿಂದ ಹೊರಬರುತ್ತಾ ಯೋಚಿಸುತ್ತಾಳೆ. 'ಹೋಗಲು ಯಾವ ಸ್ಥಳವೂ ಇಲ್ಲದ ಆದರೂ ಎಲ್ಲಾದರೂ ಹೋಗಬಯಸುವ ಹೆಣ್ಣು ನನ್ನಂತಹ ಹೆಣ್ಣು.'ಎಂದು.

'ಅನೂನ ಅಮ್ಮ' ಕಥೆಯಲ್ಲಿ 14ರ ಹುಡುಗಿ ಅನು ಲೈಂಗಿಕತೆಯ ಕುರಿತು ತಾಯಿಯೊಡನೆ ಆಡುವ ಮಾತು ಸಹಜವೆನಿಸುವುದಿಲ್ಲ. ಆದರೆ ಲೈಂಗಿಕತೆಯ ಮಡಿವಂತಿಕೆಯನ್ನು ನಿವಾರಿಸಬೇಕೆನ್ನುವುದು ಲೇಖಕಿಯ ಆಶಯವೆನಿಸುತ್ತದೆ. ಈ ಕಥೆ ಉಳಿದೆಲ್ಲ ಕಥೆಗಳಿಗಿಂತ ಭಿನ್ನವಾಗಿ ಉಲ್ಲಾಸದಾಯಕವಾದ ಓದಿನ ಅನುಭವವನ್ನು ನೀಡುತ್ತದೆ.

ತಾಯಿಯಾಗಲಿಲ್ಲವೆಂದು ಮಾನಸಿಕ ಯಾತನೆ ಅನುಭವಿಸುವ ಹೆಣ್ಣಿನ ಚಿತ್ರ' 'ಫರ್ಟಿಲಿಟಿ ಕ್ಲಿನಿಕ್'ಕಥೆ. ಇದೇ ವಸ್ತು ಕನ್ನಡದ ನೇಮಿಚಂದ್ರರ ಕಥೆಯಲ್ಲಿ ಭಿನ್ನ ರೂಪ ತಳೆದಿದೆ. ಸಂಕಲನದ ಮುಖ್ಯ ಮತ್ತು ಪ್ರಾತಿನಿಧಿಕ, ಮನಕಲಕುವ ಕಥೆ 'ಹೊಚ್ಚ ಹೊಸ ಬಿಳಿ ಸೀರೆಯ ಅಂಚು.' ಕನ್ನಡದ ಕಥೆಗಾರ ಎಸ್ ದಿವಾಕರ್ ಅವರ ಕ್ರೌರ್ಯ ಕಥೆ ನೆನಪಿಸಿತು. ಸುಲೂ, ಕುರೂಪಿಯಾಗಿ ಮದುವೆಯಾಗದೆ ಉಳಿದರೆ ತನಗೆ ಹೊರೆಯಾಗ ಬಹುದೆಂದು ಅವಳ ಅಣ್ಣ ವಯಸ್ಸಾದ ವರನಿಗೆ ಮದುವೆ ಮಾಡುತ್ತಾರೆ. ವಿಧವೆ ಸುಲೂ ಬುದ್ಧಿಮಾಂದ್ಯ ಮಕ್ಕಳೊಡನೆ ಕಷ್ಟದಲ್ಲಿದ್ದಾಗ ತಿರುಗಿ ನೋಡದ ತಂಗಿ ಅವಳು ಸತ್ತಾಗ ಅವಳ ದೇಹವನ್ನು ಹೊಸ ಸೀರೆಯಲ್ಲಿ ಸುತ್ತಲು ಬರುತ್ತಾಳೆ. ಅಕ್ಕನ ಶವಸಂಸ್ಕಾರದ ಸಂದರ್ಭದಲ್ಲಿ ನೀಲಿಮಾ ಆತ್ಮ ವಿಮರ್ಶೆ ಮಾಡಿಕೊಳ್ಳುತ್ತಾಳೆ.

**ಪ್ರಿಯಾ ತೆಂಡೂಲ್ಕರ್ ಕಥೆಗಳು**

ಮೂಲ: ಪ್ರಿಯಾ ತೆಂಡೂಲ್ಕರ್

ಕನ್ನಡ ಅನುವಾದ: ಚಂದ್ರಕಾಂತ ಪೋಕಳೆ

ಪು: 107, ಬೆಲೆ : ರೂ. 100/-

ಪ್ರ : ವಸಂತ ಪ್ರಕಾಶನ,
ನಂ.360, 10 'ಬಿ' ಮೈನ್
ಜಯನಗರ 3ನೇ ಬ್ಲಾಕ್
ಬೆಂಗಳೂರು – 560 011



'ಅಮ್ಮನೆಂಬ ಹೆಣ್ಣು' , 'ಸಾರಿ ಫಾರ್ ದಿ ಲಾಸ್ಟ್ ನೈಟ್' ಲೇಖಕಿಯ ಸೂಕ್ಷ್ಮವಾದ ಜೀವನ ವಿಮರ್ಶೆಗೆ ನಿದರ್ಶನವಾಗಿವೆ. ಪ್ರಿಯಾ ಕಥೆಗಳಲ್ಲಿ ಸಾವು ಮತ್ತೆ ಮತ್ತೆ ಕಾಡುವ ವಸ್ತು. 'ನಿರ್ಗಮನ' ಕಥೆ ತರುಣ ವಯಸ್ಕ ಮಗನ ಸಾವನ್ನು ತಂದೆ ಸ್ವೀಕರಿಸುವ ಬಗೆಯನ್ನು ನಿರೂಪಿಸಲಾಗಿದೆ. ತಂದೆ ವಿಜಯ್ ತೆಂಡೂಲ್ಕರ್ ಹೇಳುವಂತೆ ಪ್ರಿಯ ಅವರ ಕಥೆಗಳು ಬದುಕಿನಲ್ಲಿರುವ ದುಃಖವನ್ನೇ ಶೋಧಿಸುತ್ತವೆ. "ಪ್ರಿಯಾ ದುಃಖ ಹುಡುಕುತ್ತಾ ಶೋಧಿಸುತ್ತಾ ಸಾಗುತ್ತಾಳೆ. ಅವಳ ಚಿಕ್ಕ ಬದುಕೆಂದರೇನೆ ದುಃಖದ ಹುಡುಕಾಟದ ಒಂದು ಪ್ರಯೋಗ. ಈ ಕಾರಣದಿಂದಾಗಿಯೇ ಅವಳ ಬರವಣಿಗೆಗೊಂದು ಭದ್ರ ಬುನಾದಿ ಸಿಕ್ಕಿತು. ಆದರೆ ಅದಕ್ಕಾಗಿ ಅವಳು ಭಯಂಕರ ಬೆಲೆ ತೆರಬೇಕಾಯಿತು. ಸಾಮಾಜಿಕ ಬದುಕಿನ ಬಗೆಗೆ ಅವಳಿಗೆ ಅಪಾರ ಆಸಕ್ತಿ."

ಬದುಕಿನ ಸಣ್ಣ ವಿವರಗಳನ್ನು ಮತ್ತು ಮನುಷ್ಯ ಸಂಬಂಧಗಳ ಹಲವು ಆಯಾಮಗಳನ್ನು ಚಿತ್ರಿಸುವ ಬಗೆ ಹೊಸತಾಗಿದೆ. ಈ ಕಥೆಗಳನ್ನು ಸ್ತ್ರೀವಾದಿ ಎಂದು ಹೆಸರಿಸಲೂ ಆಗುವುದಿಲ್ಲ .ಸ್ತ್ರೀವಾದದ ಅರಿವುಳ್ಳ ಆದರೆ ಅದರಾಚೆಗೂ ಚಾಚಿಕೊಂಡಿರುವ ವಸ್ತು ವಿಸ್ತಾರ, ಆಶಯಗಳನ್ನುಳ್ಳ ಕಥೆಗಳೆನ್ನಬಹುದು. ಓದಿದ ನಂತರ ಬಹುಕಾಲ ಮನವನ್ನು ಕಾಡುವ ಕಥೆಗಳು. ❑



# ಕೊಡಗಿನ ಗೌರಮ್ಮ ಹೀಗಿದ್ದರಂತೆ

• ಕುಸುಮ ಶಾನ್‌ಬಾಗ್

ಹಾಗೆ ಆಗಬಹುದೆಂದು ಕನಸು–ಮನಸ್ಸಿನಲ್ಲಿಯು ಯಾರೂ ನಿರೀಕ್ಷಿಸಿರಲಿಲ್ಲ. ಹಾರಂಗಿ ಹೊಳೆಗೆ ಇತರ ಆರುಮಂದಿ ಗೆಳತಿಯರೊಂದಿಗೆ ಈಜಲು ಹೋಗಿದ್ದ ಗೌರಮ್ಮ, ಹೊಳೆಯಿಂದ ಮೇಲೆ ಬರಲೇ ಇಲ್ಲ. ಅವರು ಆಗಷ್ಟೆ ಈಜು ಕಲಿಯಲು ಆರಂಭಿಸಿದ್ದರು. ಆರು ಜನರು ಅಭ್ಯಾಸ ಮುಗಿಸಿ ಹೊಳೆಯಿಂದ ಮೇಲೆ ಬಂದಿದ್ದರು. ಅವರೆಲ್ಲರಿಗೆ ಈಜು ಕಲಿಸುತ್ತಿದ್ದವರು ಕಾಫಿ ಪ್ಲಾಂಟರ್ ಗುಂಡುಕುಟ್ಟಿ ಮಂಜುನಾಥಯ್ಯನವರು. ಅವರೂ ಹೊಳೆಯ ದಡದಲ್ಲಿದ್ದರು. ಗೌರಮ್ಮ ಬರಲಿಲ್ಲವೆಂದು ಅವರೆಲ್ಲ ಆತಂಕದಿಂದ ಹೊಳೆ ಕಡೆ ನೋಡಿದರು. ದೂರದಲ್ಲಿ ತನ್ನನ್ನು ರಕ್ಷಿಸಿ ಎಂದು ಕೇಳಿಕೊಳ್ಳುವಂತೆ ಅವರು ಕೈ ಬೀಸುತ್ತಿದ್ದರಂತೆ. ಗೌರಮ್ಮ ಮೂರು ಬಾರಿ ಕೈ ಬೀಸಿದುದನ್ನು ಅವರೆಲ್ಲರೂ ನೋಡಿದ್ದರು. ಆದರೆ ಯಾರೂ ಹೊಳೆಗೆ ಇಳಿಯಲಿಲ್ಲ. ಹೀಗೆ ಹಾರಂಗಿಯೂ ಅವಕಾಶ ಕೊಟ್ಟು ನೋಡಿದಳು. ರಕ್ಷಣೆಗೆ ಯಾರೂ ಬರಲಿಲ್ಲವೆಂದು ಕನ್ನಡದ ಕುವರಿಯನ್ನು ತನ್ನೊಡಲೊಳಗೆ ಹಾಕಿಕೊಂಡು ಮುಂದೆ ಹರಿದೇ ಬಿಟ್ಟಿಳು ಹಾರಂಗಿ. ನದಿಯಲ್ಲಿ ತೇಲಿ ಹೋಗಿದ್ದ ಅವರ ದೇಹ ಪತ್ತೆಯಾಗುವಾಗ ಸಂಜೆಯಾಗಿತ್ತಂತೆ. ಮನೆಯಲ್ಲಿದ್ದ ಎಂಟು ವರ್ಷದ ಕಂದಮ್ಮ ವಸಂತ, ಸೋಮವಾರಪೇಟೆಗೆ ಕೆಲಸದ ಮೇಲೆ ಹೋಗಿದ್ದ ಪ್ರೀತಿಯ ಪತಿ ಬಿ.ಟಿ. ಗೋಪಾಲಕೃಷ್ಣ ಅವರಿಗೆ ಮಾತ್ರವಲ್ಲ; ಕನ್ನಡ ಸಾರಸ್ವತ ಲೋಕಕ್ಕೇ ಅದೊಂದು ದುರ್ದಿನವಾಗಿ ಹೋಯಿತು.

ನಾನು ಹೇಳುತ್ತಿರುವ ಈ ದುರ್ಘಟನೆ ನಿನ್ನೆ–ಮೊನ್ನೆ ಸಂಭವಿಸಿದ್ದಲ್ಲ. ಎಪ್ಪತ್ತು ವರ್ಷಗಳ ಹಿಂದೆ, ಅಂದರೆ 1939ನೇ ಇಸವಿ ಏಪ್ರಿಲ್ 13ರಂದು ಪೂರ್ವಾಹ್ನ ಕೊಡಗಿನ ಸುಂಟಿಕೊಪ್ಪ ಸಮೀಪದ ಹರದೂರಿನಲ್ಲಿ ಹಾರಂಗಿ ಹೊಳೆಗೆ ಈಜಲು ಹೋಗಿದ್ದ ಕೊಡಗಿನ ಗೌರಮ್ಮನವರ ಅಕಾಲಿಕ ದುರ್ಮರಣದ ಘಟನೆ ಇದು. ಅವರು ಆ ಕಾಲಕ್ಕೆ 'ಶ್ರೀಮತಿ ಬಿ.ಟಿ.ಜಿ. ಕೃಷ್ಣ' ಕಾವ್ಯ ನಾಮದಿಂದ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವರದ್ದೆ ಆದ ಛಾಪು ಮೂಡಿಸಿದ್ದರು. ಗೌರಮ್ಮನವರ ಚಿಕ್ಕಪ್ಪನ ಮಗಳು ಹಾಗೂ ಗೋಪಾಲಕೃಷ್ಣನವರ ಸೋದರ ಬಿ.ಟಿ. ಗೋವಿಂದಯ್ಯನವರ ಪತ್ನಿ ಬಿ.ಜಿ. ಹೊನ್ನಮ್ಮನವರು ಹೇಳುವಂತೆ, ಆ ದಿನ ಬೆಳಿಗ್ಗೆ ಸೋಮವಾರಪೇಟೆಗೆ ಕೆಲಸದ ಮೇಲೆ ಹೊರಟಿದ್ದ ಗೋಪಾಲಕೃಷ್ಣ ತಾನೂ ಮನೆಯಲ್ಲಿ ಇಲ್ಲದಿರುವುದರಿಂದ, ಗೌರಮ್ಮನವರಿಗೆ ಅಂದು ಹೊಳೆಗೆ ಈಜಲು ಹೋಗುವುದು ಬೇಡವೆಂದು ಹೇಳಿದ್ದರಂತೆ. ಗೌರಮ್ಮ ಬೆಳಿಗ್ಗೆ ಮಗ ವಸಂತನಿಗೆ ಸ್ನಾನ ಮಾಡಿಸಿ, ಅವನನ್ನು ನಿದ್ದೆ ಮಾಡಿಸಲು ಹೊರಟಿದ್ದರಂತೆ. ಅದೇ ಹೊತ್ತಿಗೆ ಅವರೊಡನೆ ಈಜು ಕಲಿಯುತ್ತಿದ್ದವರು ಅವರನ್ನು ಕರೆದುಕೊಂಡು ಹೋಗಲು ಮನೆಗೆ ಬಂದರಂತೆ. ಅವರೆಲ್ಲರ ಒತ್ತಾಯಕ್ಕೆ ಗೌರಮ್ಮ ತಮ್ಮ ನಿರ್ಧಾರವನ್ನು ಬದಲಿಸಿದರಂತೆ. ಕೆಲಸದವಳಿಗೆ ಮಗುವನ್ನು ನಿದ್ದೆ ಮಾಡಿಸಲು ಹೇಳಿ ಗೆಳತಿಯರೊಡನೆ ಹೊರಟುಬಿಟ್ಟರು. ಅವರು ಮತ್ತೆಂದೂ ಮರಳಿ ಬರದಂತೆ ಹೊರಟೇ ಹೋದರು. ಆಗಿನ್ನೂ ಅವರಿಗೆ 27ರ ಹರೆಯ. ಅವರು ಹುಟ್ಟಿದ್ದು 1912 ಮಾರ್ಚ್ 5ರಂದು. ಮುಂದಿನ ವರ್ಷಕ್ಕೆ ಅವರು ಹುಟ್ಟಿ ನೂರು ವರ್ಷವಾಗುತ್ತದೆ.

ಗೌರಮ್ಮನದು ನೀಳಕಾಯ. ಹಾಲಿನ ಕೆನೆಯಂಥ ಮೈ ಬಣ್ಣ. ತಿದ್ದಿ ತೀಡಿದಂತಿದ್ದ ಕಣ್ಣು, ಮೂಗು, ಹುಬ್ಬುಗಳು. ಅವರು ತುಂಬ ಸುಂದರಿಯಾಗಿದ್ದರು ಎಂದು ಹೊನ್ನಮ್ಮ ಹೇಳುತ್ತಾರೆ. ಹೊನ್ನಮ್ಮನವರ ತಂದೆ ಯಾಲಕ್ಕಿ ವ್ಯಾಪಾರವನ್ನು ಮಂಗಳೂರಿನಲ್ಲಿ ಮಾಡುತ್ತಿದ್ದರಂತೆ. ಅವರು ಮಂಗಳೂರಿನಿಂದ ಬರುವಾಗ ದ್ರಾಕ್ಷಿ, ಗೋಡಂಬಿ, ಖರ್ಜೂರ, ಬಿಳಿ ಕಲ್ಲುಸಕ್ಕರೆಯನ್ನು ತರುತ್ತಿದ್ದರಂತೆ. ಗೌರಮ್ಮನವರಿಗೆ ಅವೆಲ್ಲವನ್ನು ಬೆರೆಸಿ ತಿನ್ನುವುದು ಬಹಳ ಇಷ್ಟವಂತೆ. ಚಿಕ್ಕಪ್ಪ ಮಂಗಳೂರಿನಿಂದ ಬಂದದ್ದೆ, ಗೌರಮ್ಮ ಚಿಕ್ಕಪ್ಪನ ಮನೆಯಲ್ಲಿ ಹಾಜರಾಗುತ್ತಿದ್ದರಂತೆ. ಆಗ ನಾಲ್ಕು ವರ್ಷದವರಾಗಿದ್ದ ಹೊನ್ನಮ್ಮನನ್ನು ಮಲ್ಲಿಗೆ ಹೂವು ಕೊಯ್ಯಲು ಹಿತ್ತಲಿಗೆ ಕಳುಹಿಸಿ, ಅಡುಗೆಮನೆ ಬಿಸಿಗೆಯಲ್ಲಿಟ್ಟಿದ್ದ ಡಬ್ಬಿಯಿಂದ ಒಣ ಹಣ್ಣುಗಳನ್ನು, ಕಲ್ಲು ಸಕ್ಕರೆಯನ್ನು ಉಡಿಯಲ್ಲಿ ಕಟ್ಟಿಕೊಳ್ಳುತ್ತಿದ್ದರಂತೆ. ಹೂವು ಕೊಯ್ದು ತಂದ ಹೊನ್ನಮ್ಮ ಅವರೆದುರು ನಿಂತುಕೊಂಡರೆ, ಅವರನ್ನು ಎತ್ತಿ ಮಂಚದ ಮೇಲೆ ಹಾಕಿ, ಗೌರಮ್ಮ ಒಬ್ಬರೆ ಕುಳಿತು ಒಣ ಹಣ್ಣು ತಿನ್ನುತ್ತಿದ್ದರಂತೆ. ಈ ದೃಶ್ಯವನ್ನು ಮನದಲ್ಲಿ ಅಚ್ಚೊತ್ತಿದಂತೆ ಹೊನ್ನಮ್ಮ ವಿವರಿಸುತ್ತಾರೆ.

ಗೌರಮ್ಮನವರ ಮಗ ವಸಂತನಿಗೆ ಈಗ ಎಂಬತ್ತು ವರ್ಷ. ಅವರಿಗೆ ತಾಯಿಯ ನೆನಪು ಸ್ವಲ್ಪವೂ ಮಾಸಿಲ್ಲ. ಮನೆಯಲ್ಲಿ ತಾಯಿ ಮತ್ತು ತಂದೆಯರ ದೊಡ್ಡ ಭಾವಚಿತ್ರ ಗೋಡೆಯನ್ನು ಅಲಂಕರಿಸಿದೆ. ಆದರೆ ಅವರು ತಾಯಿಯನ್ನು ನೆನಪಿಸಿಕೊಳ್ಳುತ್ತಿದ್ದಾಗ ಗೌರಮ್ಮನವರು ಅಲ್ಲೆ ಎಲ್ಲೋ ಇದ್ದಾರೆ, ಮಗನ ಮಾತನ್ನೆಲ್ಲ ಕೇಳಿಸಿಕೊಳ್ಳುತ್ತಿದ್ದಾರೆ ಎನ್ನುವ ಭಾವನೆ ಬರುತ್ತಿತ್ತು. ಅವರು ಭಾವಪೂರ್ಣವಾಗಿ ಮಾತನಾಡುತ್ತಿದ್ದರು. ಎರಡು ವರ್ಷ ಮಗುವಿದ್ದಾಗಿನಿಂದ ತಾಯಿ ಬದುಕಿರುವವರೆಗೆ ನಡೆದ ಘಟನೆಗಳನ್ನು ಅವರು ನೆನಪಿಸಿಕೊಳ್ಳುತ್ತಾರೆ. ಅವರ ಮಾತಿನಲ್ಲೆ

ಹೇಳುವುದಾದರೆ ಗೌರಮ್ಮ ಮತ್ತು ಗೋಪಾಲಕೃಷ್ಣ ಒಬ್ಬರಿಗೊಬ್ಬರು ಹೇಳಿ ಮಾಡಿಸಿದ ದಂಪತಿ. ಅವರ ವಿವಾಹ 1925ರಲ್ಲಿ ನಡೆಯಿತು. ಮದುವೆಯಾದ ಆರು ವರ್ಷಕ್ಕೆ ಅಂದರೆ 1931ರಲ್ಲಿ ಮಗ ವಸಂತ ಹುಟ್ಟಿದರು. ದಕ್ಷಿಣ ಭಾರತದಲ್ಲೆ ಶ್ರೀಮಂತರೆಂದು ಹೆಸರಾಗಿದ್ದ ಗುಂಡುಕುಟ್ಟಿ ಮಂಜುನಾಥನಯ್ಯನವರ ಕಾಫಿ ತೋಟದಲ್ಲಿ ಮ್ಯಾನೇಜರ್ ಆಗಿದ್ದ ಗೋಪಾಲಕೃಷ್ಣ, ಸ್ವಭಾವದಲ್ಲಿ ಮುಗ್ಧರು. ಒಂದು ರೀತಿಯಲ್ಲಿ ಸಂತನ ಜೀವನ ಅವರದ್ದು. ಇವತ್ತಿನದು ಇವತ್ತಿಗೆ, ನಾಳೆಯದು ನಾಳೆಗೆ ನೋಡಿಕೊಂಡರಾಯಿತು ಎಂದು ನಂಬಿದವರು. ಹಾಗಾಗಿ ಅವರು ಯಾವತ್ತೂ ಹಣ ಕೂಡಿಟ್ಟವರಲ್ಲ, ನಾಳೆಗೆ ಎಂದು ಏನನ್ನೂ ತೆಗೆದಿಟ್ಟವರಲ್ಲ. ಯಾರು ಕೇಳಿದರೂ ಕೈಯಲ್ಲಿ ಇದ್ದುದನ್ನು ಕೊಟ್ಟು ಬಿಡುತ್ತಿದ್ದರು. ಗೌರಮ್ಮನವರನ್ನು ವಿವಾಹ ಆಗಲಿಕ್ಕಾಗಿ ತೆಗೆದಿಟ್ಟ ಹಣವನ್ನೂ ಕಷ್ಟ ಎಂದು ಹಣ ಕೇಳಿದವರೊಬ್ಬರಿಗೆ ಕೊಟ್ಟು, ನಂತರ ಮದುವೆ ಖರ್ಚಿಗೆ ಬಹಳವೇ ಪರದಾಡಿದರಂತೆ. ಅವರ ಆತ್ಮೀಯ ಗೆಳೆಯರಾಗಿದ್ದ ಗಮಕಿ ಮೈ. ಶೇ. ಅನಂತಪದ್ಮನಾಭರಾವ್, ಗೋಪಾಲಕೃಷ್ಣರ ಈ ಪರದಾಟದ ಕುರಿತು 'ಗೋಪು ಮದುವೆ' ಎಂಬ ಕತೆಯೊಂದನ್ನು ಬರೆದರು. ಆ ಕತೆ 'ಜಯಕರ್ನಾಟಕ'ದಲ್ಲಿ ಪ್ರಕಟವೂ ಆಯಿತು.

ಶ್ರೀಮಂತ ಮನೆತನದ ಗೌರಮ್ಮ, ಗಂಡನಿಗೆ ಸರಿಯಾಗಿ ತೀರ ಸರಳವಾಗಿ ಇದ್ದರು. 1933ರಲ್ಲಿ ಗಾಂಧೀಜಿ ಕೊಡಗಿಗೆ ಬರುವುದಕ್ಕೂ ಮೊದಲೇ ಅವರು ಖಾದಿ ಉಡುಗೆಯನ್ನು ಧರಿಸುತ್ತಿದ್ದರು. ಮನೆಗೆ ಬಂದ ಅತಿಥಿಗಳು ಶ್ರೀಮಂತರೇ ಇರಲಿ ಬಡವರೇ ಆಗಿರಲಿ ಎಲ್ಲರಿಗೂ ಒಂದೇರೀತಿಯ ಆತಿಥ್ಯವನ್ನು ನೀಡುತ್ತಿದ್ದರು. ಅವರ ಒಡನಾಟದಲ್ಲಿಯೂ ಹೀಗೇ ವರ್ಗ, ಜಾತಿಗಳ ಸೋಂಕಿರಲಿಲ್ಲ. ಇಷ್ಟು ಮಾತ್ರವಲ್ಲ; ಮೈ.ಶೇ. ಅನಂತಪದ್ಮನಾಭರಾಯರಿಂದ ಕುಮಾರವ್ಯಾಸ ಭಾರತದ ಕಾವ್ಯವಾಚನವನ್ನು ಮನೆಯಲ್ಲಿ ನಡೆಸುತ್ತಿದ್ದರಂತೆ. ವಾರದಲ್ಲಿ ಎರಡು ಮೂರು ಸಲ ತಾಳಮದ್ದಲೆಯೂ ನಡೆಯುತ್ತಿತ್ತು. ದುರ್ಯೋಧನನ ಗದಾಯುದ್ಧದ ಪ್ರಸಂಗ ಅವರಿಗೆ ಬಹಳ ಪ್ರಿಯವಾಗಿತ್ತಂತೆ. ಕಾಫಿ ತೋಟದ ಕೆಲಸಗಾರರಿಗೆ ಮನರಂಜನೆಯಿಂದ ಅರಿವು ಮೂಡಿಸುವ ದೃಷ್ಟಿಯಿಂದ ತಾಳಮದ್ದಲೆಯಲ್ಲಿ ಅವರೂ ಭಾಗವಹಿಸುವಂತೆ ಗೌರಮ್ಮ ಪ್ರೋತ್ಸಾಹಿಸುತ್ತಿದ್ದರಂತೆ. ತೋಟದಲ್ಲಿ ದುಡಿದು, ತಾಳಮದ್ದಲೆ ತರಬೇತಿಗೆ ಬರುವ ಕೆಲಸಗಾರರಿಗೆ ಅವರಿಂದ ಬಿಸಿಕಾಫಿ, ಅವಲಕ್ಕಿ ಸಂತರ್ಪಣೆಯಾಗುತ್ತಿತ್ತು.

ಮಗ ವಸಂತ ಏನಾದರು ತಪ್ಪು ಮಾಡಿದರೆ ಗೌರಮ್ಮ ಅಷ್ಟೇ ಕಠಿಣರಾಗುತ್ತಿದ್ದರಂತೆ. ತೋಟದಲ್ಲಿ ಕೆಲಸಗಾರರು ಕೆಲಸ ಮಾಡುತ್ತಿದ್ದಾಗ, ವಸಂತ ಉದ್ದನೆಯ ಕೋಲು ಹಿಡಿದುಕೊಂಡು ಹಿಂಬದಿಯಿಂದ ಹೋಗಿ ಅವರಿಗೆ ಹೊಡೆಯುತ್ತಿದ್ದರಂತೆ. ಒಂದು ದಿನ ಹೀಗೆ ಹೊಡೆತ ತಿಂದ ಕೆಲಸದವಳೊಬ್ಬಳು, ಅಂಗಾರೆ ಕೊಂಬೆಯಿಂದ ವಸಂತನ ಹಿಂಭಾಗ ಪೂರ್ತಿ ಉಜ್ಜಿ ಬಿಟ್ಟಳಂತೆ. ಉರಿ ಹತ್ತಿದ ವಸಂತ ಅತ್ತುಕೊಂಡು ಓಡಿ ಬಂದು, ತಾಯಿಗೆ ಪುಕಾರು ಮಾಡಿದರೂ ಅವರು ಮಗನನ್ನು ಮುದ್ದಿಸಲಿಲ್ಲ. ಬದಲು, ಕೆಲಸದವರಿಗೆ ಹೊಡೆದಿರುವುದಕ್ಕೆ ಶಿಕ್ಷೆಯಾಗಿ ಕೋಣೆಯಲ್ಲಿ ಕೂಡಿ ಹಾಕಿದರಂತೆ. ಅವರ ಮೈದುನ ಬಿ.ಟಿ. ಗೋವಿಂದಯ್ಯ ಹೋಳಿಗೆ ತೆಗೆದುಕೊಂಡು ಮನೆಗೆ ಬಂದರಂತೆ. ಅವರನ್ನು ಕೋಣೆಯ ಬಾಗಿಲು ತೆಗೆಯುವಂತೆ ವಸಂತ ಅಳುತ್ತ ಕೇಳಿಕೊಂಡರಂತೆ. ಗೌರಮ್ಮ ಅವರಿಗೂ ಬಾಗಿಲು ತೆಗೆಯಲು ಬಿಡಲಿಲ್ಲವಂತೆ. ತಪ್ಪು ಯಾರೇ ಮಾಡಿದರೂ ಅವರು ಸುಮ್ಮನಿರುತ್ತಿರಲಿಲ್ಲವಂತೆ. ಪ್ರೀತಿ ಮಾಡುವಾಗ ಇನ್ನಿಲ್ಲದಂತೆ ಮುದ್ದಿಸುತ್ತಿದ್ದರಂತೆ.

ಗೌರಮ್ಮ ತೀರಿಕೊಳ್ಳುವ ಹಿಂದಿನ ದಿನ ವಸಂತನನ್ನು ಹಾರಂಗಿ ಹೊಳೆ ದಂಡೆಗೆ ಕರೆದುಕೊಂಡು ಹೋಗಿದ್ದರು. ಮಗನಿಗೆ ಮರಳ ರಾಶಿಯಲ್ಲಿ ಅರಮನೆ ಕಟ್ಟಲು ಹೇಳಿ, ಬಂಡೆಯ ಮೇಲೆ ಕುಳಿತು ಅವರು ಪುಸ್ತಕ ಓದುತ್ತಿದ್ದರಂತೆ. ಭಾರತೀಸುತರು ತಾವು ಬರೆದ ಮೊದಲ ಕಾದಂಬರಿ 'ನನ್ನ ಅತ್ತಿಗೆ' ಪ್ರಕಟಿಸುವ ಮೊದಲು ಹಸ್ತಪ್ರತಿಯನ್ನು ಗೌರಮ್ಮನವರಿಗೆ ತೋರಿಸಿದರಂತೆ. ಇಬ್ಬರೂ ಬಹಳ ಹೊತ್ತು ಮಾತನಾಡುತ್ತಿದ್ದರಂತೆ. ಮಾತು ತಮಗೆ ಅರ್ಥವಾಗದಿದ್ದರು ಏನೊ ಚರ್ಚೆ ನಡೆಯುತ್ತಿದ್ದುದು ವಸಂತ ಅವರಿಗೆ ಗೊತ್ತಾಯಿತಂತೆ. ಬಂದವರು ಯಾರು, ಯಾಕೆ ಚರ್ಚೆ ಎಂದು ಕೇಳಿದ ಮಗನನ್ನು ನಿರಾಶೆ ಗೊಳಿಸದೆ, ಭಾರತೀಸುತರು ಬರೆದು ತಂದಿರುವ ಕಾದಂಬರಿಯ ಕತೆ, ಅದಕ್ಕೆ ತಾನು ನೀಡಿದ ಅಭಿಪ್ರಾಯಗಳನ್ನು ವಿವರಿಸಿದರಂತೆ ಗೌರಮ್ಮ. ಭಾರತೀಸುತರು ಗೌರಮ್ಮನವರ ಸಲಹೆ ಸೂಚನೆಗಳನ್ನು ಪಡೆದ ನಂತರವೇ ಆ ಕಾದಂಬರಿಯನ್ನು ಪ್ರಕಟಣೆಗೆ ಕೊಟ್ಟರಂತೆ.

ಗೌರಮ್ಮನ ತಂದೆ ರಾಮಯ್ಯ ವಕೀಲರಾಗಿ, ಪ್ಲೀಡರ್ ಆಗಿ ದುಡಿಯುತ್ತಿದ್ದರು. ದೊಡ್ಡಪ್ಪ ಸುಬ್ರಾಯ ಪೊಲೀಸ್ ಅಧಿಕಾರಿಯಾಗಿದ್ದರು. ಇನ್ನಿಬ್ಬರು ಚಿಕ್ಕಪ್ಪಂದಿರು ಚಯ್ಯಂಡಾಣೆ ಸಮೀಪದ ನರಿಯಂದಡದಲ್ಲಿ ಆಸ್ತಿ ನೋಡಿಕೊಳ್ಳುತ್ತಿದ್ದರು. ಅವರ ಅಣ್ಣ ಎನ್. ಆರ್ ಗೋಪಾಲಕೃಷ್ಣ ಮಡಿಕೇರಿ ನ್ಯಾಯಾಲಯದಲ್ಲಿ ಮುಖ್ಯ ನ್ಯಾಯಾಧೀಶರಾಗಿದ್ದರು. ಗೌರಮ್ಮ ಮಡಿಕೇರಿ ಸೆಂಟ್ರಲ್ ಸ್ಕೂಲಿನಲ್ಲಿ (ಈಗ ಸರ್ಕಾರಿ ಕಿರಿಯ ಕಾಲೇಜು) ಮೆಟ್ರಿಕ್ ಮುಗಿಸಿ ಇಂಟರ್‌ಮೀಡಿಯೆಟ್‌ಗೆ ಸೇರಿದ್ದರು. ಹಿಂದಿ ವಿಶಾರದ ಪರೀಕ್ಷೆಯನ್ನು ಪಾಸು ಮಾಡಿಕೊಂಡಿದ್ದರು. ಕನ್ನಡ, ಇಂಗ್ಲಿಷ್, ಹಿಂದಿ ಭಾಷೆಗಳಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದರು. ಅವರು ಒಳ್ಳೆ ಕ್ರೀಡಾಪಟುವಾಗಿದ್ದರು. ಟೆನಿಸ್ ಆಡುತ್ತಿದ್ದರು. ಫ್ಯಾಷನನ್ನು ಇಷ್ಟಪಡುತ್ತಿದ್ದರು. ತಾವೂ 'ಮಾಡ್' ಆಗಿ ಇರುತ್ತಿದ್ದರು. ಆ ಕಾಲಕ್ಕೆ ಫ್ಯಾಷನ್ ಆಗಿದ್ದ ರೆಕ್ಕೆಯಂತೆ ಉಬ್ಬಿದ ತುಂಡು ತೋಳಿನ ರವಿಕೆಯನ್ನು ತೊಡುತ್ತಿದ್ದರಂತೆ.

ಗೌರಮ್ಮನವರನ್ನು ನೆನಪಿಸಿಕೊಂಡು ಭಾರತೀಸುತರು ಸುಮಾರು ನಲ್ವತ್ತು–ನಲ್ವತ್ತೈದು ವರ್ಷಗಳ ಹಿಂದೆ ಕಸ್ತೂರಿ ಮಾಸಪತ್ರಿಕೆಯಲ್ಲಿ ಲೇಖನ ಬರೆದಿದ್ದರು. ಭಾರತೀಸುತರು ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಮಡಿಕೇರಿ ಸಂತೆಗೆ ತರಕಾರಿ ಹೊತ್ತುಕೊಂಡು ಹೋಗಿ ಮಾರಿದ ನಂತರ ಶಾಲೆಗೆ ಹೋಗುತ್ತಿದ್ದರಂತೆ. ಮಳೆಗಾಲದಲ್ಲಿ ಒಮ್ಮೆ ಹೀಗೆ ಹೊತ್ತುಕೊಂಡು ಹೋಗಿದ್ದಾಗ ಅವರು ಮಳೆಗೆ ನೆಂದು ಪುಂಡೆಯಾಗಿದ್ದರಂತೆ. ಗೌರಮ್ಮನವರ ಅಣ್ಣನ ಮನೆ ಸಂತೆಗೆ ಹತ್ತಿರದಲ್ಲೆ ಇತ್ತು. ಈಗಲೂ ಇದೆ. ಗೇಟಿನ ಬಳಿ ನಿಂತಿದ್ದ ಗೌರಮ್ಮ, ಭಾರತೀಸುತರನ್ನು ನೋಡಿ ಮನೆಯೊಳಗೆ ಕರೆದರಂತೆ. ತಲೆ, ಮೈ ಒರೆಸಿ ಕೊಳ್ಳಲು ಮುಂಡು ಕೊಟ್ಟರಂತೆ. ಮತ್ತೊಂದು ಪಂಚೆಯನ್ನು ಕೊಟ್ಟು, ಬಟ್ಟೆ ಬದಲಿಸಿಕೊಳ್ಳಲು ಹೇಳಿದರಂತೆ. ಅಗ್ಗಿಷ್ಟಿಕೆ ಇಟ್ಟಿದ್ದ ಬಳಂಜಿಯ ಮೇಲೆ ಬಟ್ಟೆ ಹಾಕಲು ಹೇಳಿದರಂತೆ. ಅವರಿಗೆ ಕಾಫಿ–ತಿಂಡಿ ಕೊಟ್ಟು ಅದು–ಇದು ಮಾತಾಡುವ ವೇಳೆಗೆ ಬಟ್ಟೆಯೂ ಒಣಗಿತ್ತಂತೆ.



ಗೌರಮ್ಮ ಇಂಟರ್ ಮುಗಿಸಲಿಲ್ಲ. ಆ ಸಮಯಕ್ಕೆ ಅವರಿಗೆ ವಿವಾಹವಾದ್ದರಿಂದ, ಅವರ ಕಾಲೇಜು ಶಿಕ್ಷಣ ಅಲ್ಲಿಗೆ ಮುಗಿಯಿತು. ಗೌರಮ್ಮ ಕನ್ನಡ, ಇಂಗ್ಲಿಷ್ ಸಾಹಿತ್ಯವನ್ನು ಬಹಳ ಓದುತ್ತಿದ್ದರು. ಅವರಿಗೆ 'ಉಮರನ ಒಸಗೆ', 'ಮಂಕುತಿಮ್ಮನ ಕಗ್ಗ' ಬಹಳ ಪ್ರಿಯವಾದ ಪುಸ್ತಕಗಳಾಗಿದ್ದವು. ಬೇಂದ್ರೆ, ಕುವೆಂಪು, ಮಾಸ್ತಿಯವರ ಕೃತಿಗಳನ್ನು ಓದುತ್ತಿದ್ದರಂತೆ. ಜೊತೆಗೆ ಅಣ್ಣ ನ್ಯಾಯಾಲಯದಲ್ಲಿ ನೀಡುತ್ತಿದ್ದ ತೀರ್ಪುಗಳನ್ನು ಅನುವಾದ ಮಾಡಿಕೊಡುತ್ತಿದ್ದರು. ತಮ್ಮ ಓದು, ಬರಹದಿಂದಾಗಿ ಬೇಂದ್ರೆ, ಮಾಸ್ತಿ, ದ.ಬಾ. ಕುಲಕರ್ಣಿ, ಲೇಖಕಿ ಪದ್ಮಾವತಿ ರಸ್ತೋಗಿ, ನೃತ್ಯ ಕಲಾವಿದೆ ಮುತ್ತಮ್ಮ ಪೂವಯ್ಯ, ವಿದುಷಿ ಶಕುಂತಲಾ ಆಚಾರ್ ಮತ್ತು ಆರ್. ಕಲ್ಯಾಣಮ್ಮ, ಮುಂತಾದವರು ಆತ್ಮೀಯ ರಾಗಿದ್ದರು. ಬೇಂದ್ರೆ, ಮಾಸ್ತಿ, ಕುಲಕರ್ಣಿ ಕೊಡಗಿಗೆ ಬಂದಾಗ ಗೌರಮ್ಮನವರ ಮನೆಯಲ್ಲೆ ಉಳಿದುಕೊಳ್ಳುತ್ತಿದ್ದರಂತೆ.

ಗೌರಮ್ಮನವರಿಗೆ ರಾಜಕೀಯದಲ್ಲಿ ಬಹಳ ಆಸಕ್ತಿಯಿತ್ತು. ಅವರು ಕಾಂಗ್ರೆಸ್ ಪಕ್ಷಕ್ಕಾಗಿ ಕೆಲಸ ಮಾಡುತ್ತಿದ್ದರು. ಅವರ ಅಕ್ಕನ ಮಗ ವಿರಾಜಪೇಟೆಯಲ್ಲಿದ್ದ ಎಸ್.ಎಸ್. ರಾಮಮೂರ್ತಿ ಅವರಿಗೆ ಕಾಂಗ್ರೆಸ್ ಸೇರಲು ಮತ್ತು ಆಗಿನ ರಾಜಕೀಯ ಪರಿಸ್ಥಿತಿ, ಸಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಬರೆದಿದ್ದ ಪತ್ರದ ನಕಲು ಪ್ರತಿ ವಸಂತ ಅವರಲ್ಲಿದೆ. ಮೂಲಪತ್ರ ರಾಮಮೂರ್ತಿ ಅವರ ಮಗ ವಕೀಲ ಜಗದೀಶ ಈಗಲೂ ಇಟ್ಟುಕೊಂಡಿದ್ದಾರೆ. ನೆಹರುಕಾಲದಲ್ಲಿ ಕೇಂದ್ರದಲ್ಲಿ ಸಚಿವರಾಗಿದ್ದ ಸಿ.ಎಂ. ಪೂಣಚ್ಚ ಅವರನ್ನು ಗೌರಮ್ಮನವರೇ ಕಾಂಗ್ರೆಸ್ ಸದಸ್ಯರಾಗಲು ಪ್ರೇರಿಸಿದರಂತೆ. ಕೊಡಗಿನಲ್ಲಿ ಅನೇಕ ಸಾಮಾನ್ಯರೂ ಸ್ವಾತಂತ್ರ್ಯಚಳವಳಿಯಲ್ಲಿ ಪಾಲ್ಗೊಂಡಿದ್ದುದರಲ್ಲಿ ಗೌರಮ್ಮನ ಶ್ರಮವೂ ಅಡಗಿದೆ. ಕೊಡಗಿನ ಹೆಸರಾಂತ ಸ್ವಾತಂತ್ರ್ಯ ಹೋರಾಟಗಾರ ಪಂದಿಯಂಡ ಬೆಳ್ಯಪ್ಪ, ಗೌರಮ್ಮ ಇಬ್ಬರೂ ಕಾಂಗ್ರೆಸ್ಸಿಗೆ ಒಟ್ಟಿಗೇ ಕೆಲಸ ಮಾಡಿದವರು. ಒಮ್ಮೆ ಗೌರಮ್ಮ ಪೂಣಚ್ಚನವರೊಡನೆ ಮಾತುಕತೆ ಮುಗಿಸಿ ಮನೆಗೆ ಹೊರಟು ಬಂದಿದ್ದರಷ್ಟೆ, ಪೊಲೀಸರು ಬಂದು ಪೂಣಚ್ಚನವರನ್ನು ಬಂಧಿಸಿದರು. ಗೌರಮ್ಮ ಕ್ಷಣ ಮಾತ್ರದಲ್ಲಿ ಬಂಧನದಿಂದ ತಪ್ಪಿಸಿಕೊಂಡರು.

1933ರಲ್ಲಿ ಕೊಡಗಿಗೆ ಗಾಂಧೀಜಿ ಬಂದಾಗ ಗುಂಡುಕುಟ್ಟಿ ಮಂಜುನಾಥಯ್ಯನವರ ಮನೆಯಲ್ಲಿ ಉಳಿದುಕೊಂಡಿದ್ದರು. ಗೌರಮ್ಮ ಗಾಂಧೀಜಿಯವರನ್ನು ತಮ್ಮ ಮನೆಗೂ ಆಹ್ವಾನಿಸಿದರು. ಸಮಯ ವಿಲ್ಲವೆಂದು ಗಾಂಧೀಜಿ ಆಹ್ವಾನ ತಿರಸ್ಕರಿಸಿದರು. ಬಡವರ ಮನೆಗೆ ಗಾಂಧೀಜಿ ಬರುವುದಿಲ್ಲವೆಂದು ಗೌರಮ್ಮ ಆಕ್ಷೇಪಿಸಿದ್ದು ಮಾತ್ರವಲ್ಲ; ಅಲ್ಲೆ ಉಪವಾಸ ಕುಳಿತರು. ಮೀರಾ ಬೆನ್ ಗೌರಮ್ಮನವರ ಮನವೊಲಿಸಲು ಪ್ರಯತ್ನಿಸಿ ಸೋತರು. ಕೊನೆಗೂ ಗಾಂಧೀಜಿ ಗೌರಮ್ಮನಿಗೆ ಕಿತ್ತಳೆ ಹಣ್ಣು ಕೊಟ್ಟು, ಅವರ ಮನೆಗೆ ಬಂದರು. ಗೌರಮ್ಮ ಅವರನ್ನು ಮಣೆಯಿಟ್ಟು ಕೂರಿಸಿದರು. ಇದೆಲ್ಲ ಯಾಕೆಂದು ಗಾಂಧೀಜಿ ಕೇಳಿದರೂ ಅವರು ಉತ್ತರಿಸಲಿಲ್ಲ. ಒಳಗಿನಿಂದ ಒಂದು ಪಾತ್ರೆಯಲ್ಲಿ ತಮ್ಮಲ್ಲಿದ್ದ ಎಲ್ಲಾ ಚಿನ್ನದ ಆಭರಣಗಳನ್ನು ತುಂಬಿಸಿ ತಂದು ಗಾಂಧೀಜಿ ಎದುರಿನಲ್ಲಿಟ್ಟರು. ಆ ಚಿನ್ನವನ್ನು ಹರಿಜನ ಉದ್ಧಾರ ಕಾರ್ಯಕ್ಕೆ ಬಳಸುವಂತೆ ಗಾಂಧೀಜಿಯನ್ನು ಕೇಳಿಕೊಂಡರು. ಇದಕ್ಕೆ ಪತಿಯ ಒಪ್ಪಿಗೆ ಇದೆಯೆ ಎಂದು ಗಾಂಧೀಜಿ ಕೇಳಿದರಂತೆ. ಸ್ವ ಇಚ್ಛೆಯಿಂದ ಗೌರಮ್ಮ ಕೊಡುತ್ತಿದ್ದಾರೆ. ಅವರು ಮತ್ತೊಮ್ಮೆ ಒಡವೆ ಮಾಡಿಸಿಕೊಡುವಂತೆ ಕೇಳದಿದ್ದರಾಯಿತು ಎಂದು ಗಾಂಧೀಜಿಯ ಸಮೀಪವೆ ನಿಂತಿದ್ದ ಗೋಪಾಲಕೃಷ್ಣ ಹೇಳಿ ಮುಗುಳುನಕ್ಕರಂತೆ. ಗೌರಮ್ಮ ಇನ್ನು ಚಿನ್ನ ತೊಡುವುದಿಲ್ಲವೆಂದು ಗಾಂಧೀಜಿ ಎದುರು ಪ್ರತಿಜ್ಞೆ ಮಾಡಿದರಂತೆ. ಗಾಂಧೀಜಿ ಈ ಘಟನೆಯನ್ನು 1934, ಮಾರ್ಚ್ 2ರ 'ಹರಿಜನ' ಪತ್ರಿಕೆಯಲ್ಲಿ ಬರೆದಿರುವರು. ಅಲ್ಲಿಂದ ಅವರ ಜೀವಿತ ಅವಧಿವರೆಗೂ ಗೌರಮ್ಮ ಮಂಗಳಸೂತ್ರ, ಮೂಗುತಿ, ಕಿವಿ ಓಲೆಗಳನ್ನು ಮಾತ್ರ ಇಟ್ಟುಕೊಂಡಿದ್ದರು. ಗಾಂಧೀಜಿ ಈ ಭೇಟಿ ನೀಡಿದ ಸಂದರ್ಭದಲ್ಲಿಯೇ ಗೌರಮ್ಮ ಗುಟ್ಟಾಗಿ ಗಾಂಧೀಜಿ ಬಳಸಿದ ಮೈಸೂರುಸ್ಯಾಂಡಲ್ ಸೋಪನ್ನು ತೆಗೆದಿಟ್ಟುಕೊಂಡರಂತೆ. ಖಾದಿ ಚೀಲದಲ್ಲಿ ಜೋಪಾನವಾಗಿ ಇಟ್ಟುಕೊಂಡಿದ್ದರಂತೆ. ಆ ಸೋಪು, ಗೌರಮ್ಮನವರ ಸೀರೆಗಳು, ಕೈ ಬರಹ ಈಗ ಮಾನಸಗಂಗೋತ್ರಿಯಲ್ಲಿವೆ. ಗೌರಮ್ಮ ಆಡುತ್ತಿದ್ದ ಟೆನಿಸ್ ರ್‍ಯಾಕೆಟನ್ನು ವಸಂತ ಇಟ್ಟುಕೊಂಡಿದ್ದರು. ಅವರು ಅದರಲ್ಲೆ ಟೆನಿಸ್ ಆಡುತ್ತಿದ್ದರಂತೆ. ಮುಂದೆ ಅವರ ಮಕ್ಕಳೂ ಅದರಲ್ಲೆ ಆಡಿದರಂತೆ. ಈಗ ರ್‍ಯಾಕೆಟ್ ಕುಂಬಾಗಿ ಅಟ್ಟ ಸೇರಿದೆ.



ಗೌರಮ್ಮ ಇಪ್ಪತ್ತರ ದಶಕದ ಕೊನೆಯ ಭಾಗದಲ್ಲೆ ಬರೆಯಲು ಆರಂಭಿಸಿರಬೇಕು. ನಮಗೆ ದಾಖಲೆ ಸಿಗುವುದು 1931ರಿಂದ ಬರೆದ ಕತೆಗಳು. 'ಜಯಕರ್ನಾಟಕ', 'ರಾಷ್ಟ್ರ ಬಂಧು', 'ಪ್ರಜಾಮತ' 'ಜಯಂತಿ' ನಿಯತಕಾಲಿಕಗಳಲ್ಲಿ ಅವರ ಕಥೆಗಳು ಪ್ರಕಟವಾಗುತ್ತಿದ್ದವು. ಆದರೆ ಅವರ ಎರಡು ಕಥಾ ಸಂಕಲನಗಳು 'ಚಿಗುರು' ಮತ್ತು 'ಕಂಬನಿ' ಅವರ ನಿಧನದ ನಂತರವಷ್ಟೆ ಪ್ರಕಟವಾದವು. ದ.ಬಾ. ಕುಲಕರ್ಣಿಯವರು ತಮ್ಮ ಪ್ರಕಾಶನ 'ಮನೋಹರ ಗ್ರಂಥ ಭಂಡಾರ'ದಿಂದ ಈ ಎರಡು ಸಂಕಲನಗಳನ್ನು ಹೊರತಂದರು. 1954ರಲ್ಲಿ ಅವರ ಅನುಮತಿ ಪಡೆದು ನಾಪೋಕ್ಲು ಎಂ.ಎಸ್. ಸುಬ್ರಾಯರು, ಸಿ.ವಿ. ರಾಮರಾವ್ ಅವರ ಸಂಪಾದಕತ್ವದಲ್ಲಿ 'ಕಾವೇರಿ ಪ್ರಕಟನಾಲಯ'ದಿಂದ ಗೌರಮ್ಮನ ಕಥೆಗಳು ಭಾಗ 1 ಮತ್ತು ಭಾಗ-2ರಲ್ಲಿ ಅವರ ಎಲ್ಲಾ ಕಥೆಗಳನ್ನು ಮರು ಮುದ್ರಿಸಿದರು. 80ರ ದಶಕದಲ್ಲಿ ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಪ್ರಕಟವಾದ ಮಹತ್ವದ ಕನ್ನಡ ಕೃತಿಗಳಲ್ಲಿ ಗೌರಮ್ಮನವರ ಸಮಗ್ರ ಕಥೆಗಳು ಮತ್ತೊಮ್ಮೆ ಪ್ರಕಟಗೊಂಡವು. 1998ರಲ್ಲಿ ಆಗ ಜಾನಪದ ಅಕಾಡೆಮಿಯ ಅಧ್ಯಕ್ಷರಾಗಿದ್ದ ಪ್ರೊ. ಕಾಳೇಗೌಡ ನಾಗವಾರರು ಗೌರಮ್ಮನವರ ಕಥೆಗಳನ್ನು ವಿಮರ್ಶೆಯೊಂದಿಗೆ ಪುಸ್ತಕವನ್ನು 'ಜೀವನ ಪ್ರೀತಿ' ಎಂಬ ಹೆಸರಿನಲ್ಲಿ ಹೊತರಂದರು. ಲೇಖಕಿಯರ ಸಂಘದಿಂದ ಇಂದಿರಾ ಶಿವಣ್ಣ ಅವರೂ ಗೌರಮ್ಮನ ಕುರಿತು ಪುಸ್ತಕವನ್ನು ಬರೆದಿದ್ದಾರೆ. ಹೆಸರಾಂತ ವಿಮರ್ಶಕಿ ಡಾ. ಬಿ.ಎನ್. ಸುಮಿತ್ರಾಬಾಯಿ ಅವರೂ ಗೌರಮ್ಮನ ಕತೆಗಳನ್ನು ವಿಮರ್ಶಿಸಿ ಲೇಖನಗಳನ್ನು ಬರೆದಿದ್ದಾರೆ.

ಗೌರಮ್ಮನವರ ಅಕಾಲಿಕ ನಿಧನದಿಂದ ದುಃಖಿತರಾಗಿದ್ದ ಬೇಂದ್ರೆಯವರು 'ತಂಗಿ ಗೌರಮ್ಮನಿಗೆ' ಸಾನೆಟ್ ಬರೆದು ಶ್ರದ್ಧಾಂಜಲಿ ಅರ್ಪಿಸಿದರು. '**ಕಂಬನಿ**' ಕಥಾಸಂಕಲನದಲ್ಲಿ ಈ ಸಾನೆಟ್ ಪ್ರಕಟವಾಗಿದೆ. **ಜಲದೇವತೆ ವನದೇವತೆ ಒಂದೆಡೆಯಲಿ ಸೇರಿ/ ಬಿನದಿಸುತಿಹ ಹೊಳೆಮಡುವಿಗೆ ನೀ ನೀಸಲು ಹಾರಿ....** ಹೀಗೆ ಸಾಗುವ ಕವನ- **ನೆನೆದರೆಯೇ ನಾ ನಡುಗುವೆ ಇದು ಆದುದು ಅದೆಂತೊ/ ಎಲ್ಲಿಂದೀ ಎಳೆಜೀವಕೆ ಸಾವೆಂಬುದು ಬಂತೋ/ ಪತಿಯೊಲವಿನ ಸುತನೊಲವಿನ ಕೆಳೆಯೊಲವಿನ ತಂತು/ ಜಗ್ಗದೆ ನಿನ್ನನು ಮೇಲಕೆ? ನೀ ಮುಳುಗಿದೆ ಎಂತು?/ ಗೌರವಸ್ತ ಗೌರಸ್ಮಿತ ಗೌರವದೀ ಗೌರೀ/ಮಿಂಚಿದಳದೋ ಬಾನಂಚಿಕೆ ಕಾವೇರಿಯ ಕುವರಿ!/** ಎಂದು ಮುಂದುವರಿಯುತ್ತದೆ.

ಗೌರಮ್ಮ ತಮ್ಮ ಮೊದಲ ಕತೆ 'ಪುನರ್ವಿವಾಹ'ವನ್ನು 1931ರಲ್ಲಿ ಬರೆದರು. ಇದು ತಮ್ಮ ಮೆಚ್ಚಿನ ಕತೆಯೆಂದು ಅವರು ಹೇಳಿಕೊಂಡಿದ್ದಾರೆ. ಅಲ್ಲಿಂದ 1939ರವರೆಗೆ ಇಪ್ಪತ್ತು ಕತೆಗಳನ್ನು ಬರೆದಿದ್ದಾರೆ. *ಅವಳ ಭಾಗ್ಯ, ಕೌಸಲ್ಯಾನಂದನ, ನಾಲ್ಕು ಘಟನೆಗಳು, ಅಪರಾಧಿ ಯಾರು? ಹೋಗಿಯೇ*

*ಬಿಟ್ಟಿದ್ದ, ಮನುವಿನ ರಾಣಿ, ಒಂದು ಚಿತ್ರ, ಪಾಪನ ಮದುವೆ, ಮರದಗೊಂಬೆ, ವಾಣಿಯ ಸಮಸ್ಯೆ, ನನ್ನ ಮದುವೆ, ಸನ್ಯಾಸಿ ರತ್ನ, ಒಂದು ಪುಟ್ಟ ಚಿತ್ರ, ಪ್ರಾಯಶ್ಚಿತ್ತ, ಕೆಲವು ಕಾಗದಗಳು, ಅದೃಷ್ಟದ ಆಟ, ಆಹುತಿ* ಅವರ ಪ್ರಮುಖ ಕತೆಗಳು. ತೀರಿಕೊಳ್ಳುವ ಹಿಂದಿನ ದಿನವಷ್ಟೆ *'ಮುನ್ನಾದಿನ'* ಎಂಬ ಕತೆಯನ್ನು ಭಾಗಶಃ ಬರೆದಿದ್ದರು. ಈ ಕತೆಯಲ್ಲಿ ಬರುವ ಮೇಸ್ತ್ರಿ ಕಾಡ ಅವರ ಮನೆಯಲ್ಲೆ ಕೆಲಸಕ್ಕೆ ಇದ್ದ. ಅವನು ಗೌರಮ್ಮನವರು ತೀರಿಕೊಂಡ ನಂತರವೂ ಅನೇಕ ವರ್ಷ ಅವರ ಮನೆಯಲ್ಲೆ ಕೆಲಸ ಮಾಡುತ್ತಿದ್ದ. 1938ರಲ್ಲಿ ಅವರು ಹತ್ತಕ್ಕೂ ಹೆಚ್ಚು ಕಥೆಗಳನ್ನು ಬರೆದರು. *'ವಾಣಿಯ ಸಮಸ್ಯೆ'* ಅವರ ಅತ್ಯುತ್ತಮ ಕತೆಗಳಲ್ಲೊಂದು. ನಂಜನಗೂಡು ತಿರುಮಲಾಂಬ, ಆರ್. ಕಲ್ಯಾಣಮ್ಮನ ನಂತರ ಹೆಸರಿಸ ಬಹುದಾದ ಮತ್ತೊಬ್ಬರು ಗೌರಮ್ಮ. ಆ ಕಾಲದಲ್ಲಿ ಸಮಾಜ ಜಾತಿ, ಧರ್ಮ, ಆಚಾರಗಳ ಬಿಗಿ ಮುಷ್ಟಿಯಲ್ಲಿದ್ದಾಗ, ಗೌರಮ್ಮ ಅವುಗಳಿಂದ ಆಗುತ್ತಿದ್ದ ಹಾನಿಯನ್ನು ನಿರ್ಭೀತಿಯಿಂದ ಚಿತ್ರಿಸಿದರು. ವಿಶೇಷವಾಗಿ ಮಹಿಳೆಯರ ಬಾಳನ್ನು ಹೊಸಕಿಹಾಕುವ ಜಡ ಸಂಪ್ರದಾಯ, ಆಚಾರಗಳಿಗೆ ಕನ್ನಡಿ ಹಿಡಿದರು.

ಮೂವತ್ತರ ದಶಕದಲ್ಲಿ ಮಹಿಳೆಯರ ಶೋಷಣೆಗಳಿಗೆ ಧ್ವನಿಯೇ ಮೂಡಿರದಿದ್ದಾಗ ಗೌರಮ್ಮ ಧ್ವನಿ ಕೊಟ್ಟರು. ಮೂವತ್ತರ ದಶಕದ ಮಹಿಳಾವಾದಿ ಲೇಖಕಿ ಎಂದು ನಾವು ಅವರನ್ನು ಕರೆದರೂ ತಪ್ಪಾಗುವುದಿಲ್ಲ. ಇದಕ್ಕೆ ಉದಾಹರಣೆಯಾಗಿ 'ಪುನರ್ವಿವಾಹ' 'ಒಂದು ಪುಟ್ಟ ಚಿತ್ರ' 'ಆಹುತಿ' 'ನಾಲ್ಕು ಘಟನೆಗಳು' ಮುಂತಾದ ಕತೆಗಳಿವೆ. ಪುನರ್ವಿವಾಹದಲ್ಲಿ ಒಂದು ಹೆಣ್ಣು ಮಗುವಿನ ತಂದೆ ಮೂವತ್ತೈದರ ಹರೆಯದ ವಿಧುರ ಮರು ವಿವಾಹಕ್ಕೆ ಮೊದಲು ಒಪ್ಪದಿದ್ದರೂ ಲಾವಣ್ಯವತಿಯಾದ ಹದಿನೈದರ ಬಾಲೆಯನ್ನು ಕಂಡಾಗ ತನ್ನ ನಿರ್ಧಾರವನ್ನು ಬದಲಿಸುತ್ತಾನೆ. ಆ ಹುಡುಗಿ ರಾಜಿಯನ್ನು ಮದುವೆಯಾಗುವುದಾಗಿ ತಾಯಿಯ ಮೂಲಕ ಅವಳ ತಾಯಿಗೆ ತಿಳಿಸುತ್ತಾನೆ. ಕೊನೆಗೂ ಮದುವೆಯ ಕಾಲ ಸಮೀಪಿಸುತ್ತದೆ. ಹುಡುಗಿ ತಾನು ಬಾಲವಿಧವೆ ಎಂದು ಹೇಳಿದಾಗ ಅವನ ಆಲೋಚನೆಯ ಧಾಟಿಯೇ ಬದಲಾಗುತ್ತದೆ. 'ತಿಳಿಯದೆ ವಿಧವೆಯನ್ನು ಮದುವೆಯಾಗಿ ಕುಲಕ್ಕೆ ಕಲಂಕ ತಾರದಿದ್ದಂತೆ ಮಾಡಿದ ಭಗವಂತನನ್ನು ಮನದಲ್ಲಿಯೇ ವಂದಿಸಿದೆ' ಎಂದು ಹೇಳುತ್ತಾನೆ ಈ ವಿಧುರ!

'ನೀನು ವಿಧವೆ ಎಂದು ತಿಳಿದಿದ್ದರೆ ನಿನ್ನ ಮುಖವನ್ನು ಸಹ ನೋಡುತ್ತಿರಲಿಲ್ಲ. ಯಾವ ವಿಧವೆಯನ್ನು ಪ್ರಾತಃಕಾಲ ನೋಡಿದರೆ ಅಮಂಗಲವೋ ಅಂತಹ ವಿಧವೆಯನ್ನು ಮದುವೆಯಾಗುವವನು ನಾನಲ್ಲ' ಎಂದು ಹರಿಹಾಯ್ದಾಗ, ರಾಜಿ 'ವಿಧವೆಯ ಮುಖ ನೋಡಿದರೆ ಅಮಂಗಲ, ವಿಧುರನನ್ನೋ..?' ಎಂದು ಪ್ರಶ್ನಿಸುವ ಗಟ್ಟಿ ವ್ಯಕ್ತಿತ್ವದವಳು. ವರದಕ್ಷಿಣೆ ಕೊಡಲಾಗದ ಬಡವರ ಮನೆ ಹೆಣ್ಣುಮಕ್ಕಳಿಗೆ ಬಾಳಿಲ್ಲ ಎನ್ನುವ ವಾಸ್ತವತೆ, ಪ್ರೀತಿಸಿ, ವಿವಾಹ ಆಗುವುದಾಗಿ ನಂಬಿಸಿ, ಗರ್ಭಿಣಿಯಾದಾಗ ವಂಚಿಸುವ ಹುಡುಗ... ಸಮಾಜ ಎದುರಿಸಲಾಗದೆ ಆತ್ಮಹತ್ಯೆ ಮಾಡಿಕೊಳ್ಳುವುದು... ಹೀಗೆ ಅಸಹಾಯಕ, ಅಸಹನೀಯ ಸ್ಥಿತಿಗಳಲ್ಲಿ ಮಾತ್ರ ಹೆಣ್ಣುಮಗಳ ಸೋಲುವ ಚಿತ್ರಗಳಿವೆ. ಆದರೆ ಬಹುತೇಕ ಕತೆಗಳಲ್ಲಿ ಗೌರಮ್ಮನವರ ಸ್ತ್ರೀ ಪಾತ್ರಗಳು ವಿಚಾರ ಮಾಡುತ್ತವೆ. ಸಮಾಜದಲ್ಲಿ ಸ್ತ್ರೀ ಪುರುಷರ ನಡುವೆ ಬಲವಾಗಿ ಬೇರೂರಿರುವ ಅಸಮಾನತೆಗಳನ್ನು ಪ್ರಶ್ನಿಸುತ್ತವೆ.



'ನಾಲ್ಕು ಘಟನೆಗಳು' ಕತೆಯಲ್ಲಿ ನಾಲ್ವರು ಹೆಣ್ಣು ಮಕ್ಕಳ ಭಿನ್ನ ಚಿತ್ರಣಗಳಿವೆ. ಇಲ್ಲಿ ಒಂದು ಪ್ರಸಂಗದಲ್ಲಿ ಹೆಣ್ಣುಮಕ್ಕಳಿಗೆ ಆಸ್ತಿಯಲ್ಲಿ ಪಾಲು ದೊರೆಯಲು 'ಶಾರದ' ಮಸೂದೆ ಕಾನೂನಾಗಿ ಬರಬೇಕು ಎನ್ನುವ ಪ್ರಸ್ತಾಪ ಬರುತ್ತದೆ. ಹೆಣ್ಣುಮಕ್ಕಳಿಗೆ ಆರ್ಥಿಕ ಸ್ವಾತಂತ್ರ್ಯ ಇರಬೇಕೆನ್ನುವ ಅಭಿಪ್ರಾಯವನ್ನು ಗೌರಮ್ಮ 1933ರಲ್ಲಿ ಬರೆದ ಈ ಕತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಪತ್ರಗಳ ಮೂಲಕ ಕಥೆ ಹೇಳುವ ಮೂರು ಪ್ರಯೋಗಗಳನ್ನು ಗೌರಮ್ಮ ಮಾಡಿದ್ದಾರೆ. 'ಅಪರಾಧಿ ಯಾರು' ಎನ್ನುವ ಕತೆಯಲ್ಲಿ ಉನ್ನೀಸಾ ಎಂಬುವಳು ತನ್ನ ಅಣ್ಣನಿಗೆ ಪತ್ರ ಬರೆದು ಅತ್ಯಾಚಾರಕ್ಕೆ ಒಳಗಾದ ಬ್ರಾಹ್ಮಣ ಅನಾಥ ಹೆಣ್ಣು ಮಗಳ ರಕ್ಷಣೆಯ ಚಿಂತನೆಯನ್ನು ಮಾಡುತ್ತಾಳೆ. ಪಂಡಿತರ ಮಗಳು ತಬ್ಬಲಿ ಪಾರ್ವತಿಯನ್ನು ಆಕೆ ಕೆಲಸ ಮಾಡುತ್ತಿದ್ದ ಮನೆಯ ಯಜಮಾನ ನಾಗೇಶರಾಯ ಅತ್ಯಾಚಾರ ಮಾಡಿ, ಆಕೆ ನಡತೆ ಕೆಟ್ಟವಳೆಂದು ಜಾತಿಯಿಂದ ಹೊರಗೆ ಹಾಕಿಸುತ್ತಾನೆ. ದಿಕ್ಕು ಕಾಣದೆ ಆತ್ಮಹತ್ಯೆಗೆ ಯತ್ನಿಸುವ ಅವಳನ್ನು ಉನ್ನೀಸಾ ರಕ್ಷಿಸಿ, ಅವಳ ಬದುಕಿಗೊಂದು ದಾರಿ ತೋರಿಸಲು ಅವಳನ್ನು ಮುಸ್ಲಿಂ ಧರ್ಮಕ್ಕೆ ಸೇರಿಸಿಕೊಳ್ಳುತ್ತಾಳೆ. ಅವಳು ಪತ್ರದಲ್ಲಿ "ಅನಾಥ ಅಬಲೆಯರನ್ನು ಅತ್ಯಾಚಾರಿಯು ಅತ್ಯಾಚಾರ ಮಾಡುವುದೇ ಅವರ ಜಾತಿಯ ನೀತಿಯಾದರೆ ನಮಗೆ ಆ ಜಾತಿಯಲ್ಲಿ ಜನ್ಮ ಕೊಡದಿರುವುದಕ್ಕೆ ದೇವರನ್ನು ಎಷ್ಟು ವಂದಿಸಿದರೂ ಸಾಲದು" ಎಂದು ಹೇಳುತ್ತಾಳೆ. ಪಾರ್ವತಿ ಶಾಸ್ತ್ರೋಕ್ತವಾಗಿ ರಜಿಯಾ ಆದಾಗ ಊರಿನ ಹಿಂದುಗಳು ವಿಷಾದಿಸಿ, ನಾಗೇಶರಾಯನ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಮುಂದೆ ಈ ರೀತಿ ಸಂಭವಿಸದಂತೆ ಧರ್ಮ ರಕ್ಷಿಸುವ ನಿರ್ಧಾರ ತೆಗೆದುಕೊಳ್ಳುತ್ತಾರೆ. ಈ ಕತೆಯ ವ್ಯಂಗ್ಯವಿರುವುದೆ ಇಲ್ಲಿ!

ಪ್ರೀತಿ, ಪ್ರೇಮ ತುಂಬಿರುವ ಬಾಳು ಜಾತಿ ಧರ್ಮಗಳನ್ನು ಮೀರಿದ್ದು ಎಂಬ ಸಾರವನ್ನೂ ಗೌರಮ್ಮನವರ 'ಅವನು ಹೋಗಿಯೇ ಬಿಟ್ಟಿದ್ದ' 'ಮುನ್ನಾದಿನ' ಕತೆಗಳು ಹೇಳುತ್ತವೆ. 'ಮುನ್ನಾದಿನ'ದಲ್ಲಿ ಕಾಡನಿಗೆ ಹೊಟ್ಟೆಗೆ ಅನ್ನ ಬೇಕು. ಅದರ ಆಚೆಗಿನ ಯೋಚನೆ ಅವನಿಗಿಲ್ಲ. ಯಜಮಾನನ ನಿರ್ದೇಶನದಂತೆ ಕ್ರೈಸ್ತನಾದ. ಕೆಲವು ವರ್ಷಗಳಲ್ಲಿ ಆ ಯಜಮಾನ ತೋಟ ಮಾರಿ ಹೊಸ ಯಜಮಾನ ಬರುತ್ತಾನೆ. ಕಾಡ ತರುಣನಾಗಿರುತ್ತಾನೆ. ತಾನು ಪ್ರೇಮಿಸಿದ ಮುಸ್ಲಿಂ ಹುಡುಗಿಯೊಂದಿಗೆ ವಿವಾಹ ಆಗಬೇಕಿರುತ್ತದೆ. ಹುಡುಗಿಯ ಮನೆಯವರು ಹೇಳಿದಂತೆ ಮುಸ್ಲಿಮನಾಗುತ್ತಾನೆ. ಮೊದಲ ಯಜಮಾನ ಇದ್ದಿದ್ದರೆ ಏನಾಗುತ್ತಿತ್ತು... ಇಂಥ ಯೋಚನೆಗಳೂ ಅವನನ್ನು ಕಾಡುವುದಿಲ್ಲ. ಆ ಧರ್ಮ, ಈ ಧರ್ಮ ಎನ್ನುವುದು ಇಲ್ಲಿ ಮುಖ್ಯವಾಗುವುದೇ ಇಲ್ಲ. 'ಮನುವಿನ ರಾಣಿ' ವೇಶ್ಯೆಯ ಬದುಕಿಗೆ ಸಂಬಂಧಿಸಿದ್ದು. ಆಕೆಗೂ ಪ್ರೀತಿಸುವ ಹೃದಯ ಇರುತ್ತದೆ. ಪ್ರೀತಿಸಿದವನಿಗಾಗಿ ತ್ಯಾಗಮಯಿಯಾಗಿರುತ್ತಾಳೆ ಎಂಬ ಅಂಶ ಈ ಕತೆಯಲ್ಲಿ ವ್ಯಕ್ತವಾಗಿದೆ.

'ವಾಣಿಯ ಸಮಸ್ಯೆ' ಸುಂದರವಾದ ಕತೆ. ಹುಟ್ಟುತ್ತಲೆ ತಂದೆ–ತಾಯಿ, ವಿವಾಹವಾದದ್ದೆ ಗಂಡನನ್ನು ಕಳೆದುಕೊಂಡಾಕೆ ಇಂದು, ಗಂಡನ ಮನೆಯವರಿದ್ದರೂ ಬೇರೆ ಮನೆಯಲ್ಲಿ ಒಂಟಿಯಾಗಿ ಜೀವನ ಸಾಗಿಸುತ್ತಾಳೆ. ಅವಳ ಜೀವನದಲ್ಲಿ ಒಂಟಿತನದ ಅಸಹನೀಯ ನೋವಿನ ಅಲೆ ಏಳುವುದು ಪಕ್ಕದಲ್ಲಿನ ಅದೆಷ್ಟೋ

ವರ್ಷ ಖಾಲಿ ಬಿದ್ದಿದ್ದ ಮನೆಗೆ ವಾಣಿ ಮತ್ತು ಅವಳ ಪತಿ ವೈದ್ಯನಾಗಿರುವ ರತ್ನ ವಾಸಕ್ಕೆ ಬಂದಾಗ. ವಾಣಿಯ ಗೆಳೆತನ ಬೆಳೆದು, ಇಬ್ಬರೂ ಆತ್ಮೀಯರಾದ ಸಂದರ್ಭದಲ್ಲಿ ಅವಳ ಮನಸ್ಸಿಗೆ ಗರ ಬಡಿಯುವ ಸನ್ನಿವೇಶ ಬರುತ್ತದೆ. ತನ್ನ ಮಡದಿಗೆ ಮನೆ ಅಚ್ಚುಕಟ್ಟಾಗಿ ಇಡಲು ಸಹಕರಿಸುವ ಪಕ್ಕದ ಮನೆಯ ಇಂದುವನ್ನು ನೋಡಲು ರತ್ನ ತವಕಿಸುತ್ತಾನೆ. ಅವಳನ್ನು ನೋಡಲಿಕ್ಕಾಗಿಯೇ ಒಂದು ದಿನ ಆಸ್ಪತ್ರೆಯಿಂದ ಬೇಗ ಬರುತ್ತಾನೆ. ರತ್ನನನ್ನು ಹತ್ತಿರದಿಂದ ನೋಡಿದಾಗ ಇಂದುವಿನ ಸುಪ್ತ ಮನಸ್ಸು ಜಾಗೃತಗೊಳ್ಳುತ್ತದೆ. ಬಯಕೆ ತಲೆ ಎತ್ತುತ್ತದೆ. ಒಂಟಿತನ ಕಾಡುತ್ತದೆ. ತಲೆನೋವೆಂದು ನೆಪ ಹೇಳಿ ವಾಣಿ–ರತ್ನರೊಡನೆ ಸಿನೆಮಾಕ್ಕೆ ಹೋಗುವುದನ್ನು ತಪ್ಪಿಸಿಕೊಳ್ಳುತ್ತಾಳೆ. ಮಲಗಿದ್ದ ಇಂದುಗೆ ಮುಗ್ಧೆ ವಾಣಿ ಪತಿಯಿಂದ ಪರೀಕ್ಷೆ ಮಾಡಿಸುತ್ತಾಳೆ. ದೇಹಕ್ಕೆ ಆಗುವ ಪುರುಷ ಸ್ಪರ್ಷ ಮಾತ್ರದಿಂದ ಅವಳ ಆಲೋಚನೆಗಳಲ್ಲಿ ಆಗುವ ಬದಲಾವಣೆ, ವಾಣಿಯ ಬಗ್ಗೆ ಮೂಡುವ ಮಾತ್ಸರ್ಯ, ಮಾನಸಿಕ ತಾಕಲಾಟಗಳ ಸುಂದರ ಚಿತ್ರಣವಿದೆ. ಮಾವನ ಮನೆಗೆ ಅನಿವಾರ್ಯವಾಗಿ ವಾಣಿ ಹೋಗಬೇಕಾದಾಗ ರತ್ನ ಇಂದುಗಾಗಿ ಹಾತೊರೆಯುತ್ತಾನೆ, ಅವಳ ಧ್ಯಾನದಲ್ಲಿ ಮುಳುಗಿ ಹೋಗುತ್ತಾನೆ. ಕೊನೆಗೂ ಭೇಟಿಯಾಗಿ ಮಾತಿಗೆ ಇಳಿಯುತ್ತಾನೆ. ಅವನ ಧ್ವನಿಯಲ್ಲಿ ತನ್ನ ಹೆಸರನ್ನು ಕರೆಯುವಾಗ ಮೂಡಿದ ಆತ್ಮೀಯತೆ, ಬಹುವಚನದಿಂದ ಏಕವಚನಕ್ಕೆ ಇಳಿದಾಗ ಅವನು ಬಯಸಿದ ಸಾಮಿಪ್ಯ ಇಂದುಗೆ ಗೊತ್ತಾಗುತ್ತದೆ. ರತ್ನನ ಕಾಗದ ಅವಳ ಕೈ ಸೇರಿದಾಗ ಅವಳ ಮನಸ್ಸು ಬಯಕೆ–ಸ್ನೇಹ ವಿಶ್ವಾಸ ಮತ್ತು ಮೌಲ್ಯಗಳ ಘರ್ಷಣೆಗೆ ಇಳಿಯುತ್ತದೆ. ಆಕೆ ಪತ್ರವನ್ನು ಓದದೆಯೇ ಒಲೆಗೆ ಹಾಕುತ್ತಾಳೆ. ಎಂದೂ ಎಲ್ಲಿಗೂ ಹೋಗದವಳು ಮನೆಗೆ ಬೀಗ ಜಡಿದು ಹೊರಟುಹೋಗುತ್ತಾಳೆ. ಗೌರಮ್ಮ ಇಲ್ಲಿ ಕತೆಯನ್ನು ವಾಚ್ಯ ಮಾಡದೆ ಯಶಸ್ವಿಯಾಗಿಸಿದ್ದಾರೆ. ಇದಾದ ಎರಡೇ ದಿನಗಳಲ್ಲಿ ವಾಣಿ ಬಂದವಳು, ಇಂದು ಮನೆಗೆ ಓಡಿ ಬರುತ್ತಾಳೆ. ಮನೆ ಬಾಗಿಲಿಗೆ ಹಾಕಿರುವ ಬೀಗ ವಾಣಿಗೆ ಸಮಸ್ಯೆಯಾಗಿಯೇ ತೋರುತ್ತದೆ. ಅದಕ್ಕೆ ಅವಳಿಗೆ ಉತ್ತರವೂ ಸಿಗುವುದಿಲ್ಲ.

ಸನ್ಯಾಸಿ ರತ್ನ ಹಾಸ್ಯ ಕತೆಯಾಗಿದೆ. ಅಚಲ ಬ್ರಹ್ಮಚಾರಿಯಾಗಿರುವುದಾಗಿ ಹೇಳಿಕೊಳ್ಳುತ್ತಿದ್ದ ರತ್ನ, ಸುಂದರಳಾದ ಸಂಗೀತಗಾರ್ತಿಯನ್ನು ನೋಡಿ, ಅವಳಿಗೆ ಮರುಳಾಗುವುದು ಮಾತ್ರವಲ್ಲ, ಬ್ರಹ್ಮಚರ್ಯ ವ್ರತವನ್ನೆ ಮರೆತುಬಿಡುತ್ತಾನೆ. 'ಕೆಲವು ಕಾಗದಗಳು' ಕತೆ ಓದಿದ ಮುಳಿಯ ತಿಮ್ಮಪ್ಪಯ್ಯನವರು ಕನ್ನಡದಲ್ಲಿ ಇದೊಂದು ಹೊಸದಾರಿ ಎಂದು ಹೇಳಿದ್ದಾರೆ. ಈ ಲೇಖಕರು ಬರವಣಿಗೆ ಮುಂದುವರೆಸಿ, ಕನ್ನಡವನ್ನು ಬೆಳಗಿಸುವಂತೆ ಆಗಲಿ ಎಂದೂ ಹಾರೈಸಿದ್ದಾರೆ.

ಗೌರಮ್ಮನವರ ಎಲ್ಲಾ ಕತೆಗಳಲ್ಲಿ ಪ್ರಾದೇಶಿಕತೆಯನ್ನು ಬಹಳ ಕಡಿಮೆ ಕಾಣುತ್ತೇವೆ. ಇವು ಯಾವುದೇ ಊರಿನಲ್ಲಿ ನಡೆದ ಕತೆಗಳೂ ಆಗಬಹುದು. ಅವರು ಬಾಳಿದ ಕಾಲದಲ್ಲಿ ಕೊಡಗಿನಲ್ಲಿ ದಟ್ಟ ಕಾಡುಗಳಿದ್ದವು. ಮುನ್ನೂರು ಇಂಚುಗಳಿಗೂ ಹೆಚ್ಚು ಮುಂಗಾರು ಮಳೆಯಾಗುತ್ತಿತ್ತು, ಮಂಜು, ಚಳಿಗಳಿಂದ ಮಡಿಕೇರಿಯಂಥ ಪುಟ್ಟ ಊರಿಗೆ ಮುಕ್ತಿಯೇ ಇರುತ್ತಿರಲಿಲ್ಲ. ಜೊತೆಗೆ ಕೊಡಗಿನ ಸಂಸ್ಕೃತಿ ಬೇರೆಡೆಗೆ ಹೋಲಿಸಿದರೆ ಭಿನ್ನವಾಗಿತ್ತು. ಈ ಯಾವ ಚಿತ್ರಣಗಳು ಅವರ ಕತೆಯಲ್ಲಿ ಕಾಣುವುದಿಲ್ಲ. ಆ ಸಮಯದಲ್ಲಿ ಕೊಡಗಿನಲ್ಲಿ ಬ್ರಿಟಿಷರ ಪ್ರಭಾವ ಗಾಢವಾಗಿತ್ತು, ಸ್ವತಃ ರಾಜಕೀಯದಲ್ಲಿ ಕ್ರಿಯಾಶೀಲರಾಗಿದ್ದ ಗೌರಮ್ಮನವರು ಈ ಬಗ್ಗೆಯೂ ಕತೆ ಬರೆಯಲಿಲ್ಲ. ಅವರು ಬದುಕಿದ್ದರೆ ಈ ಎಲ್ಲಾ ಅಂಶಗಳು ಮುಂದಿನ ಅವರ ಬರವಣಿಗೆಯಲ್ಲಿ ಬಂದೇ ಬರುತ್ತಿದ್ದವು.

ಗೌರಮ್ಮನವರನ್ನು ಕನ್ನಡ ಸಾಹಿತ್ಯ ಲೋಕ ಗುರುತಿಸಿತ್ತು. ಜಮಖಂಡಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಅವರು ಕೊಡಗು ಜಿಲ್ಲೆಯನ್ನು ಪ್ರತಿನಿಧಿಸಿದ್ದರು. ಮಡಿಕೇರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಸಕ್ರಿಯರಾಗಿ ಪಾಲ್ಗೊಂಡಿದ್ದರು. ಅವರ ಕತೆಯೊಂದಕ್ಕೆ ಉಡುಪಿ ಗೆಳೆಯರ ಬಳಗದಿಂದ ಚಿನ್ನದ ಪದಕವೂ ಲಭಿಸಿತ್ತು. 1964ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಗೌರಮ್ಮನವರ ಕಥೆಗಳನ್ನು ಪದವಿ ತರಗತಿಗಳಿಗೆ ಪಠ್ಯವನ್ನಾಗಿ ಮಾಡಿಕೊಂಡಿತು. ಮಂಗಳೂರು ವಿಶ್ವವಿದ್ಯಾಲಯದವರು ಪದವಿ ತರಗತಿಗೆ ಅವರ ಕೆಲವು ಕತೆಗಳನ್ನು ತೆಗೆದುಕೊಂಡಿದ್ದರು. ಮುಂಬೈ, ಮದರಾಸು ವಿಶ್ವವಿದ್ಯಾಲಯಗಳ ಪದವಿ ತರಗತಿಗಳಿಗೂ ಅವರ ಕತೆಗಳು ಪಠ್ಯವಾಗಿದ್ದವಂತೆ. ಒಂದು ವೇಳೆ ಗೌರಮ್ಮನವರು ದೀರ್ಘಾಯುಶಿ ಯಾಗಿದ್ದಿದ್ದರೆ.... ಎಂದು ಕೇಳಿದರೆ, ಅವರ ಮಗ ವಸಂತ, 'ಅಮ್ಮ ಇನ್ನೂ ಬಹಳ ಬರೆಯುತ್ತಿದ್ದರು...ಉನ್ನತ ಸ್ಥಾನಕ್ಕೆ ಹೋಗುತ್ತಿದ್ದರು. ಜೊತೆಗೆ ರಾಜಕೀಯದಲ್ಲೂ ಬಹಳ ಮುಂದಕ್ಕೆ ಹೋಗುತ್ತಿದ್ದರು' ಎಂದು ಹೇಳಿದರು.

ಗೌರಮ್ಮನವರ ಕತೆಗಳನ್ನು ಓದಿ, ಆ ಮೂಲಕ ಅವರನ್ನು ಚಿತ್ರಿಸಿಕೊಂಡರೆ, ಈಗಿನ ರಾಜಕೀಯದಿಂದ ಅವರು ಬಹಳವೇ ದೂರ ಉಳಿಯುತ್ತಿದ್ದರು ಎಂದು ನನಗನಿಸಿತು. ಗೌರಮ್ಮನವರ ಮೊಮ್ಮಗ ಅವಿನಾಶ್ ಗೋಪಾಲ ಗೌರಮ್ಮನವರ ಕೆಲವು ಕತೆಗಳನ್ನು ಇಂಗ್ಲಿಷ್‌ಗೆ ಅನುವಾದಿಸಿ, ಅಮೆರಿಕಾದ ಸಾಹಿತ್ಯ ವಲಯದಲ್ಲಿ ಅಜ್ಜಿಯನ್ನು ಪರಿಚಯಿಸಿದ್ದಾನೆ. ಅವರ ಮರಿಮೊಮ್ಮಗಳು ಇಂಗ್ಲಿಷ್‌ನಲ್ಲಿ ಕವನಗಳನ್ನು ಬರೆಯುತ್ತಾಳೆ. ವಸಂತ ತಾಯಿಯ ಹೆಸರಿನಲ್ಲಿ ಪ್ರತಿವರ್ಷ ಹವ್ಯಕ ಕನ್ನಡದಲ್ಲಿ ಬರೆದ ಅತ್ಯುತ್ತಮ ಕಥೆಗೆ ಬಹುಮಾನ ಕೊಡುತ್ತಾರೆ. ಕೊಡಗು ಕನ್ನಡ ಸಾಹಿತ್ಯ ಪರಿಷತ್ತು ಗೌರಮ್ಮ ಸ್ಮಾರಕ ದತ್ತಿ ಉಪನ್ಯಾಸವನ್ನು ನಡೆಸಿಕೊಂಡು ಬರುತ್ತಿದೆ. ಹೀಗೆ ಗೌರಮ್ಮನ ನೆನಪು ಕನ್ನಡ ಓದುಗರು ಇರುವ ವರೆಗೂ ಮಾಸಲು ಸಾಧ್ಯವಿಲ್ಲ.

❑

*"ಜಾಗತೀಕರಣದ ಫಲವಾಗಿ ಮನುಷ್ಯರು ತಾವು ಬಯಸದೆ ಇದ್ದ ಬದಲಾವಣೆಗಳನ್ನೂ ಒಪ್ಪುವಂತಾಗಿದೆ. ಆದರೆ ನಾವು ಒಟ್ಟಾದರೆ ಈ ಪ್ರಚಲಿತ ಅಸಮತೋಲನದ ಅರ್ಥವ್ಯವಸ್ಥೆಯನ್ನು, ರಾಜಕೀಯವನ್ನೂ, ಮಾನವ ಪರಿಸ್ಥಿತಿಗಳನ್ನೂ ಬದಲಾಯಿಸಬಲ್ಲೆವು. ಬೀದಿಯಲ್ಲಿ ಭಿಕ್ಷೆ ಬೇಡುವ ಪುಟ್ಟ ಹುಡುಗಿಗೂ ಈ ವ್ಯವಸ್ಥೆಯಲ್ಲಿ ಅವಳ ಪಾಲು ಸಿಕ್ಕಬೇಕು. ನಾವೆಲ್ಲ ಎಲ್ಲೋ ಒಂದು ರೀತಿ ಅವಳ ಜೊತೆ ಸಂಬಂಧ ಹೊಂದಿರುತ್ತೇವೆ."*

***–ಸುಮನಾ ಚೌಧುರಿ,** (ಚಿತ್ರಕಲಾವಿದೆ)*

(ಸುಮನಾ ಚೌಧುರಿ ಬೆಂಗಳೂರು ಮೂಲದವರು. ಕೋಲ್ಕತ್ತಾದ ವಿಶ್ವಭಾರತಿ ವಿಶ್ವವಿದ್ಯಾಲಯದಿಂದ ಚಿತ್ರಕಲೆಯ ಎಂ.ಎ. ಪದವಿ ಪಡೆದು Kent Institute of Art and Design, Canterbury ಯಲ್ಲಿ ಕಲಾವಿದೆಯಾಗಿ ಸೇರಿದವರು. ಮುಂದೆ ಲಂಡನ್ನಿನ Central St. Martin College of Fine Arts ನ ಸ್ಕಾಲರ್‌ಷಿಪ್ ಪಡೆದಿದ್ದಾರೆ.)

# ವಸಾಹತೋತ್ತರ ಭಾರತದಲ್ಲಿ ಸ್ತ್ರೀವಾದಿ ತಾತ್ತ್ವಿಕತೆ ಮತ್ತು ಮಹಿಳಾ ಬರಹ

• ಜ್ಯೋತಿ ಪಂಜವಾನಿ

*ಡಾ. ಜ್ಯೋತಿ ಪಂಜವಾನಿ ಈಸ್ಟರ್ನ್ ಇಲಿನಾಯ್ಸ್ ವಿಶ್ವವಿದ್ಯಾಲಯ, ಇಲಿನಾಯ್ಸ್‌ನಲ್ಲಿ ಇಂಗ್ಲಿಷ್ ವಿಭಾಗದಲ್ಲಿ ಪ್ರಾಧ್ಯಾಪಕಿ. ಅವರು ವಸಾಹತೋತ್ತರ ಕಾಲದಲ್ಲಿ ಹೊಮ್ಮಿಬಂದ ಭಾರತೀಯ ಮಹಿಳಾ ಸಾಹಿತ್ಯಗಳ ಅಧ್ಯಯನದ ಮೂಲಕ ತೃತೀಯ ಜಗತ್ತಿನ ಸ್ತ್ರೀವಾದದ ಸೈದ್ಧಾಂತೀಕರಣ ತೃತೀಯ ಜಗತ್ತಿನ ಮಹಿಳೆಯರ ಬಹುಸಾಂಸ್ಕೃತಿಕ ಸಂದರ್ಭಕ್ಕೆ ಸಂವಾದಿಯಾಗಿರಬೇಕು ಎಂದು ಪ್ರತಿಪಾದಿಸುತ್ತಾರೆ. ವಸಾಹತೋತ್ತರ ಕಾಲದಲ್ಲಿ ವಿವಿಧ ಭಾರತೀಯ ಭಾಷೆಗಳ ಲೇಖಕಿಯರ ಕಥನ ಸಾಹಿತ್ಯದಲ್ಲಿ ವ್ಯಕ್ತಿಸ್ವಾತಂತ್ರ್ಯ ಮತ್ತು ಸಾಮಾಜಿಕತೆಗಳ ನಡುವಿನ ಹೊಯ್ದಾಟಗಳ ಮೂಲಕವೇ ಮಹಿಳಾ ವಿಮೋಚನೆಯಕಡೆಗೆ ವಿಚಾರಧಾರೆಯೊಂದು ಹೊಮ್ಮಿ ಬರುತ್ತಿರುವುದನ್ನು ಅವರು ಗುರುತಿಸುತ್ತಾರೆ. ಅವರ "Community and Freedom : Theorizing post colonial Indian Feminism" ಎಂಬ ಲೇಖನದ ಸಂಗ್ರಹಾನುವಾದ ಇಲ್ಲಿದೆ. ಸಂಗ್ರಹಕ್ಕೆ ಹೊಂದುವ ಶೀರ್ಷಿಕೆ ಇಲ್ಲಿ ನೀಡಲಾಗಿದೆ.*

*ಸ್ತ್ರೀವಾದಿ ಸಿದ್ಧಾಂತ ಹಾಗೂ ಮಹಿಳಾ ಚಳವಳಿಗಳು ಪ್ರತಿಪಾದಿಸುವ ರಾಜಕೀಯ ಹಕ್ಕೊತ್ತಾಯಗಳೇ ನೇರವಾಗಿ ಮಹಿಳೆಯರ ಸಾಹಿತ್ಯದಲ್ಲೂ ಪುನರುಚ್ಚಾರ ಆಗುತ್ತಿರುವುದಿಲ್ಲ. ಹಾಗೆ ಆಗಲೇಬೇಕು ಎಂದೂ ಇಲ್ಲ. ಸೃಜನಶೀಲ ನೆಲೆಯಲ್ಲಿ ಅನುಭವಕ್ಕೆ ಕೊಡುವ ಅಭಿವ್ಯಕ್ತಿಯ ಸಿದ್ಧಾಂತಕ್ಕೇ ಪೂರಕವಾಗಿ ಇರಬಹುದಾದರೂ ಅದಕ್ಕಿಂತ ಹೆಚ್ಚಿನ ಅರ್ಥವಿಶಾಲತೆಯನ್ನೂ ಹೇಳಬಲ್ಲದು. ಈ ನಿಟ್ಟಿನಲ್ಲಿ ಮಹಿಳಾ ಸಾಹಿತ್ಯದ ಅಧ್ಯಯನಕ್ಕೆ ಹೊರಡುವವರಿಗೆ ಉಪಯುಕ್ತ ಆದೀತು ಎಂದು ಈ ಲೇಖನವನ್ನು ನಾವು ಪ್ರಕಟಿಸಿದ್ದೇವೆ.*

*– ಸಂ.*

ವಸಾಹತೋತ್ತರ ಭಾರತದಲ್ಲಿ ಮಹಿಳೆಯರ ಬರಹಗಳಲ್ಲಿ ಸ್ತ್ರೀವಾದದ ಬೆಳವಣಿಗೆ ಮತ್ತು ಅಭಿವ್ಯಕ್ತಿಗೆ ಪೂರಕವಾದ ವಿಶಿಷ್ಟ ಕಳಕಳಿಯೊಂದು ಹೊಮ್ಮಿಬಂದಿತು. ಈ ಕಳಕಳಿಯು ಪ್ರಮುಖವಾಗಿ ಪಿತೃಸಂಸ್ಕೃತಿಯ ತಾತ್ವಿಕತೆಗಳಲ್ಲಿನ ದಮನಕಾರಿ ಲಕ್ಷಣಗಳನ್ನು ಬಯಲಿಗೆಳೆಯುವ ರೀತಿಯದಾಗಿತ್ತು. ಪಿತೃಪ್ರಾಧಾನ್ಯಕ್ಕೆ ಪರ್ಯಾಯ ಕಾರ್ಯಾಚರಣೆಯೊಂದನ್ನು ಕಂಡುಕೊಳ್ಳುವ ಯತ್ನ ಇದು. ಭಾರತದ ಬೇರೆ ಬೇರೆ ಭಾಷೆಗಳ ಲೇಖಕಿಯರು ಮಹಿಳೆಯರ ಬಿಡುಗಡೆಯ ಪ್ರಶ್ನೆಯನ್ನು ಬೇರೆ ಬೇರೆ ವಿಧಾನಗಳಿಂದ ಎತ್ತುತ್ತಿದ್ದಾರೆ. ಸಮಾಜವು ಮಹಿಳೆಯರ ಬದುಕಿನಲ್ಲಿ ವಹಿಸುವ ಪಾತ್ರವೇನು? ಸ್ತ್ರೀವಾದವು ಹಕ್ಕೊತ್ತಾಯಿಸುವ ವ್ಯಕ್ತಿಸ್ವಾತಂತ್ರ್ಯಕ್ಕೆ ಅದು ಎಷ್ಟರಮಟ್ಟಿಗೆ ನೆರವಾಗುತ್ತದೆ. ಇಲ್ಲವೆ ತಡೆಯೊಡ್ಡುತ್ತದೆ ಎಂಬ ಪ್ರಶ್ನೆಗಳನ್ನು ನಿರ್ವಹಿಸುವ ವಿಧಾನವು ಒಬ್ಬೊಬ್ಬ ಲೇಖಕಿಯದೂ ಬೇರೆ ಬೇರೆಯೇ. ಮೂರನೆಯ ಜಗತ್ತಿನ ಸ್ತ್ರೀವಾದಿವಿಮರ್ಶೆ ಹಾಗೂ ಸೈದ್ಧಾಂತೀಕರಣವು ಈ ಜಗತ್ತಿನ ಮಹಿಳೆಯರ ಬಹುರೂಪದ ಸಾಂಸ್ಕೃತಿಕ ಸಂದರ್ಭಗಳಿಗೆ ಪ್ರತಿಸ್ಪಂದಿಸಬೇಕಾಗುತ್ತದೆ. ಈ ವಿಚಾರದ ಹಿನ್ನೆಲೆಯಲ್ಲಿ ಇಲ್ಲಿ ಬೇರೆ ಬೇರೆ ಭಾರತೀಯ ಭಾಷಾ ಲೇಖಕಿಯರ ಕಥನ ಸಾಹಿತ್ಯವನ್ನು ವಿಶ್ಲೇಷಿಸಲು ಯತ್ನಿಸಲಾಗಿದೆ. ಅನಿತಾದೇಸಾಯಿ (ಇಂಗ್ಲಿಷ್), ಆಶಾಪೂರ್ಣದೇವಿ (ಬಂಗಾಳಿ), ಇಸ್ಮತ್ ಚುಗ್ತಾಯಿ (ಉರ್ದು), ಮನ್ನೂಭಂಡಾರಿ (ಹಿಂದಿ), ವೈದೇಹಿ (ಕನ್ನಡ), ಪಿ. ಹೀರಾನಂದಿನಿ (ಸಿಂಧಿ), ಕುಂದನಿಕಾ ಕಪಾಡಿಯಾ (ಗುಜರಾತಿ), ಛಾಯಾದಾತಾರ್ (ಮರಾಠಿ) ಮತ್ತು ಅಂಬಾಯಿ (ಸಿ.ಎಸ್.ಲಕ್ಷ್ಮಿ–ತಮಿಳು) ಇವರ ಬರಹಗಳ ಇಂಗ್ಲಿಷ್ ಭಾಷಾಂತರಗಳು ಈ ಲೇಖನಕ್ಕೆ ಆಕರಗಳಾಗಿವೆ.

### ಅನಿತಾದೇಸಾಯಿ

ಪಿತೃ ಸಂಸ್ಕೃತಿಯ ಸಮಾಜದ ವಿರುದ್ಧ ಬಂಡೇಳುವ ನಾಯಕಿಯರನ್ನು ಅನಿತಾದೇಸಾಯಿ ಸೃಷ್ಟಿಸುತ್ತಾರೆ. ತಾವು ಇಚ್ಛಿಸುವಂತೆ ಬದುಕಲು, ತಮ್ಮ ತನದ ಶಕ್ತಿಯನ್ನು ಹುಡುಕಿಕೊಳ್ಳಲು ವ್ಯವಸ್ಥೆಯ ವಿರುದ್ಧ ಬಂಡೇಳುವ ಮಹಿಳೆಯರು ಈ ಪ್ರತಿಭಟನೆಯಿಂದ ಮುಂದೆ ಆಗಬಹುದಾದ ಪರಿಣಾಮಗಳ ಬಗ್ಗೆ ತಲೆಕೆಡಿಸಿ ಕೊಳ್ಳುವವರಲ್ಲ. ಸ್ವತಂತ್ರ ವ್ಯಕ್ತಿಗಳಾಗಲು ಬಯಸುವ ತಮ್ಮ ಹಾದಿಗೆ ಅಡ್ಡಿ ಉಂಟುಮಾಡುವ ಪಿತೃಪ್ರಧಾನ ವ್ಯವಸ್ಥೆಯ ಸಾಂಪ್ರದಾಯಿಕ ಧೋರಣೆಗಳನ್ನು ಪರಕೀಯವಾಗಿ ನಿಂತು ವಿಮರ್ಶಿಸುವುದು ಅವರ ರೀತಿ, ಹೀಗೆ ವಿಮರ್ಶಿಸುವುದರಲ್ಲಿ ಅವರ ಹೋರಾಟಕ್ಕೆ ಪ್ರೇರಕ ಶಕ್ತಿಯನ್ನೂ ಪಡೆದುಕೊಳ್ಳುತ್ತಿರುತ್ತಾರೆ. ವ್ಯವಸ್ಥೆಗೆ ಹೀಗೆ 'ಅನ್ಯ'ರಾಗಿ ಅದರಿಂದ ದೂರವುಳಿಯುವ ಜಾಗವನ್ನು ಆಯ್ಕೆ ಮಾಡಿಕೊಳ್ಳುವುದರಿಂದ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳುವುದೂ ಅವರಿಗೆ ಸಾಧ್ಯವಾಗುತ್ತದೆ. ಸಮಾಜದ ಸ್ವೀಕೃತ ಬದುಕಿನ ರೀತಿಗೆ ಹೀಗೆ ಪರಕೀಯವಾಗಿ ಉಳಿಯುವುದರಲ್ಲಿ ಪರಿಪೂರ್ಣತೆ, ಸಫಲತೆಗಳ ಕೊರತೆಯನ್ನು ಅವರು ಒಬ್ಬಂಟಿಗಳಾಗಿ ಅನುಭವಿಸುತ್ತಾರೆ. ಈ ಕೊರತೆಯನ್ನು ತುಂಬಿಕೊಳ್ಳಲು ಯಾವುದೂ ಅವರ ನೆರವಿಗೆ ಬರುವುದಿಲ್ಲ. ತಮ್ಮ ಬಹಿಷ್ಕಾರ, ಬಂಡಾಯಗಳ ಅರ್ಥಹೀನತೆ ಕೊನೆಯಲ್ಲಿ ಅವರ ಅರಿವಿಗೆ ಬರುತ್ತದೆ. ವ್ಯವಸ್ಥೆಯ ವಿರುದ್ಧ ದಿಕ್ಕಿನಲ್ಲಿ ತಾವು ನಡೆಸಿದ್ದು ಹೋರಾಟವೆನಿಸಿದ್ದು ಕೇವಲ ಪಲಾಯನವಾದ ಎಂದು ಅನ್ನಿಸಿದಾಗ ಅವರು ಆತ್ಮಹತ್ಯೆ ಅಥವಾ



ಮನೋರೋಗಕ್ಕೆ ಬಲಿಯಾಗುತ್ತಾರೆ. ಮಹಿಳೆಯರು ವ್ಯಕ್ತಿಸ್ವಾತಂತ್ರ್ಯಕ್ಕಾಗಿ ನಡೆಸುವ ಹೋರಾಟದ ವ್ಯರ್ಥತೆಯ ಸಂಕಥನದ ಒಳದನಿ, ಎಂದರೆ ವ್ಯವಸ್ಥೆಯೊಂದಿಗೆ ಇದ್ದುಕೊಂಡೇ ಮಹಿಳೆ ತನ್ನ ಬಿಡುಗಡೆಗೂ ಯತ್ನಿಸಬೇಕು ಎಂಬುದಾಗಿದೆ.

ಅನಿತಾದೇಸಾಯಿಯ ನಾಯಕಿಯರು ಸ್ವಾತಂತ್ರ್ಯ ಮತ್ತು ಸಾಮಾಜಿಕ ಅಸ್ತಿತ್ವಗಳೆರಡನ್ನೂ ಹೊಂದಿರುವ ಆದರ್ಶಪ್ರಾಯ ಜೀವನಕ್ರಮವೊಂದನ್ನು ಕಟ್ಟುವ ಯತ್ನ ಮಾಡುವುದಿಲ್ಲ. ವಿಮುಕ್ತಮಹಿಳೆ ಎಂದರೆ ಮದುವೆ ವ್ಯವಸ್ಥೆಗೆ ಪರಕೀಯಳಾಗಿ ಉಳಿದಿರುವ ಏಕಾಕಿ ಮಹಿಳೆ ಎಂಬ ಮಾದರಿಯೇ ಇಲ್ಲಿ ಎದ್ದು ತೋರುತ್ತದೆ. ಮದುವೆಯ ಮೂಲಕ ಹತಾಶೆ, ಹಿಂಸೆ, ಆತ್ಮವಿನಾಶವನ್ನು ಹೊಂದುವ ಮಹಿಳೆಯರು ಮಾನಸಿಕ ಸಮತೋಲನ ಕಳೆದುಕೊಂಡು ಆತ್ಮಹತ್ಯೆಗೆ ಶರಣು ಹೋಗುವುದೇ ಇಲ್ಲಿ ಹೆಚ್ಚಾಗಿರುವುದನ್ನು ಕಾಣಬಹುದು.

ಮಹಿಳೆ ಏಕಾಕಿಯಾಗಿದ್ದಾಗ ಮಾತ್ರ ನಿಜವಾದ ವ್ಯಕ್ತಿತನವನ್ನು ಗಳಿಸಿಕೊಳ್ಳಬಹುದು ಎಂಬ ಚಿತ್ರವನ್ನು ನೀಡಿದ್ದರೂ ಅನಿತಾದೇಸಾಯಿ ವಿವಾಹಸಂಸ್ಥೆಯ ರದ್ದತಿಗಾಗಿ ಏನೂ ಆಗ್ರಹಿಸುವುದಿಲ್ಲ. ಅಥವಾ ಸಾಮಾಜಿಕವಾಗಿ 'ಪರಕೀಯಳಾಗಿ' ಇರುವ ಮಹಿಳೆಯ ಸ್ಥಿತಿಯನ್ನು ಬೆಂಬಲಿಸುವುದೂ ಇಲ್ಲ. ವೈವಾಹಿಕ ಬದುಕಿನೊಳಗೂ ತಮ್ಮ ತಮ್ಮ ಸಾಂಪ್ರದಾಯಿಕ ಬದುಕಿನ ವಲಯಗಳ ಪರಿಮಿತಿಯಲ್ಲೇ ಸಂತೋಷ, ಸಂತೃಪ್ತಿಗಳಿಂದ ಬದುಕುವ ಮಹಿಳೆಯರನ್ನೂ ಅವರು ಚಿತ್ರಿಸುತ್ತಾರೆ, ಮಹಿಳೆಯರು ಕೇವಲ ಸಿದ್ಧಪಾತ್ರಗಳಲ್ಲಿ ಯಥಾಸ್ಥಿತಿಯಲ್ಲಿ ಉಳಿದಿರದೆ ಜೀವನದ ಬಹುಮುಖ ಸಾಧ್ಯತೆಗಳಿಗೂ ತಮ್ಮ ತಿಳಿವಳಿಕೆಯನ್ನು ವಿಸ್ತರಿಸಿಕೊಳ್ಳಬೇಕು ಎಂಬುದನ್ನು ತಲುಪಿಸಲು ಅನಿತಾದೇಸಾಯಿ ಯತ್ನಿಸುತ್ತಾರೆ.

ಅನಿತಾದೇಸಾಯಿ ಪ್ರತಿಪಾದಿಸುವ ವಿಮೋಚನೆಯ ಪರಿಕಲ್ಪನೆ ಪುರುಷರಮೇಲೆ ಅವಲಂಬಿತವಾಗಿ ಉಳಿಯುವುದರಿಂದ ಹೆಣ್ಣು ಹೊರಬರಬೇಕು, ಬಹುಮುಖ ಅನುಭವಗಳೊಂದಿಗೆ ಚೈತನ್ಯಯುಕ್ತವಾಗಿ ಬದುಕಲು ಯತ್ನಿಸಬೇಕು, ಸಮಾಜದ ಬೆಂಬಲವಿಲ್ಲದೆ, ಯಾರೊಬ್ಬರಿಗೂ ಸೇರಿರದ ಸ್ಥಿತಿಯೇ ಯಾತನಾದಾಯಕ ಎಂಬುದಕ್ಕಿಂತ ಸಮಾಜದ ಒಳಗಿದ್ದುಕೊಂಡೇ ತನ್ನ ವೈಯಕ್ತಿಕತೆಯನ್ನು ಕಾಯ್ದುಕೊಳ್ಳುವುದು ಹೇಗೆ ಎಂಬ ಮಹಿಳೆಯ ತಾಕಲಾಟ, ಒಳತೋಟಿಯ ಚಿತ್ರಣ ಅವರಿಗೆ ಮುಖ್ಯವಾಗುತ್ತದೆ. ಇತರರೊಂದಿಗೆ ತಮ್ಮ ಕೊಂಡಿಗಳನ್ನು ಜೋಡಿಸಿಕೊಳ್ಳುತ್ತ ಅದೇ ಹೊತ್ತಿನಲ್ಲಿ ತಮ್ಮ ವೈಯಕ್ತಿಕವಾದ ಬೌದ್ಧಿಕ, ಆರ್ಥಿಕ ಸ್ವಾತಂತ್ರ್ಯವನ್ನು ಆ ಇತರರು ಗೌರವದಿಂದ ಸಮಾನವಾಗಿ ಕಾಣುವಂತೆ ವ್ಯಕ್ತಿವಾದಿಯಾದ ಸಾಮಾಜಿಕ ಸಮತೋಲನದ ಕಡೆಗಿನ ಹುಡುಕಾಟ ಅವರದಾಗಿದೆ.

**ಮನ್ನೂ ಭಂಡಾರಿ**



ಭಾರತೀಯ ಮಹಿಳೆಯ ಹೊಯ್ದಾಟಗಳು ಮನೆ-ಜಗತ್ತು, ಸಮಾಜ ಮತ್ತು ಸ್ವಾತಂತ್ರ್ಯ ಇವುಗಳ ನಡುವಿನ ತಿರುವಿನಲ್ಲಿ ನಿಂತ ಸ್ಥಿತಿಯಿಂದ ಹೊಮ್ಮಿ ಬಂದವುಗಳು. ಇಂತಹ ತಾಕಲಾಟಗಳು ಮನ್ನೂ ಭಂಡಾರಿಯವರ ಕತೆಗಳ ಕೇಂದ್ರ ವಸ್ತುಗಳು. ಈ ವಿರುದ್ಧ ಜಾಗಗಳ ನಡುವೆ ಒಂದನ್ನು ಮತ್ತೊಂದಕ್ಕಿಂತ ಮೇಲು ಎಂದು ಆರಿಸಿಕೊಳ್ಳಲು ಸಾಧ್ಯವಾಗದ ತೊಳಲಾಟ ಇದು. ಸಾಮಾಜಿಕ ಪರಿಸರದಿಂದ ದೂರ ಸರಿವ ಕ್ರಿಯೆ ಸ್ತ್ರೀಯರಿಗೆ ಯಾವತ್ತೂ ನೋವು, ಹತಾಶೆ, ಅಸಹಾಯಕತೆ ಮತ್ತು ಗೊಂದಲಗಳ ಮೂಲವಾಗುತ್ತದೆ. ಈ ಒಳತೋಟಿಗಳನ್ನು ದಾಟಿ ಬರುವುದಕ್ಕೆ ಅವರು ಮಾಡುವ ಯತ್ನಗಳು ಮನ್ನೂ ಭಂಡಾರಿಯವರ ಶೋಧನೆಗೆ ವಸ್ತುಗಳು.

ಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆ ಪುರುಷರೊಂದಿಗಿನ ಪರಾಧೀನ ಸಂಬಂಧದ ಅಪಮಾನಗಳಿಂದ ಬಿಡುಗಡೆ ಪಡೆಯಲು ಮಹಿಳೆಯರಿಗೆ ನೆರವಾಗುತ್ತವೆ. ಕುಟುಂಬ ಮತ್ತು ಸಮಾಜದ ಜೊತೆಗಿನ ಅವರ ಹೋರಾಟವು ತಮ್ಮೊಳಗಿನ ತಾಯಿ-ಪತ್ನಿ ಮತ್ತು ವ್ಯಕ್ತಿಯ ನಡುವಿನ ಹೋರಾಟವೇ ಆಗಿರುತ್ತದೆ. ಲಿಂಗತ್ವ ಆಧಾರಿತ ಸಾಮಾಜಿಕ ತಾರತಮ್ಯಗಳು ಈ ಹೋರಾಟವನ್ನು ತೀಕ್ಷ್ಣವಾಗಿಸುತ್ತವೆ. ಪಿತೃಸಂಸ್ಕೃತಿಯ ತಾರತಮ್ಯದ ಧೋರಣೆಗಳು ಮಹಿಳೆಯರಲ್ಲಿ ಅಸಹಾಯಕತೆ, ಗೊಂದಲಗಳನ್ನು ಹುಟ್ಟಿಹಾಕುತ್ತವೆ. ಅವರು ಉನ್ನತ ಶಿಕ್ಷಣ ಪಡೆದವರಾಗಲಿ, ಆರ್ಥಿಕವಾಗಿ ಸ್ವತಂತ್ರರೇ ಇರಲಿ, ಭಾವನಾತ್ಮಕವಾಗಿ ಮಾನಸಿಕವಾಗಿ ಪುರುಷಾವಲಂಬಿತತೆಯನ್ನು ಕೊಡವಿಕೊಂಡು ಹೊರಬರಲಾರರು.

ವಸಾಹತೋತ್ತರ ಭಾರತದ ಕುಟುಂಬ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷರು ತಮ್ಮ ಪತ್ನಿಯರನ್ನು ಸಮಾನರೆಂದು ನಡೆಸಿಕೊಳ್ಳಲೂ ಅಥವಾ ಅವರೊಂದಿಗೆ ಸ್ಪರ್ಧಿಸಲೂ ಸಿದ್ಧರಿಲ್ಲ. ಇದರಿಂದಾಗಿ ಸ್ತ್ರೀ ಪುರುಷ ಸಂಬಂಧಗಳಲ್ಲಿ ಸಮಸ್ಯೆಗಳು ಸೃಷ್ಟಿಯಾಗುತ್ತವೆ. ನಗರಗಳ ಶಿಕ್ಷಿತರಲ್ಲಿ ಈ ಸಮಸ್ಯೆಗಳು ತೀವ್ರರೂಪ ತಳೆಯುತ್ತವೆ. ಆರ್ಥಿಕ ಸ್ವಾತಂತ್ರ್ಯವು ಮಹಿಳೆಯರಿಗೆ ತಮ್ಮ ಅಪೇಕ್ಷೆಗಳನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ಒಂದು ಅವಕಾಶ ನೀಡುತ್ತದೆ. ಆದರೆ ಸಮಾಜದ ಹಲವಾರು ಸಂಚುಗಾರಿಕೆಗಳು ಈ ಹೊಸದಾಗಿ ಗಳಿಸಿಕೊಂಡ ಸ್ವಾತಂತ್ರ್ಯ ಎನ್ನುವುದನ್ನು ಬದುಕಿನ ಅಸಹನೀಯ ವೇದನೆಯ ಮೂಲವಾಗುವಂತೆ ಮಾಡುತ್ತವೆ. ಭಾರತೀಯ ಸಮಾಜಗಳಲ್ಲಿ ವ್ಯಕ್ತಿಗಳಾಗಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುವುದಕ್ಕೆ ಸ್ತ್ರೀ-ಪುರುಷರಿಬ್ಬರಿಗೂ ಒಂದೇ ತೆರನಾದ ಸ್ವಾತಂತ್ರ್ಯವಿಲ್ಲ. ಇಂದಿಗೂ ಮಹಿಳೆ ಪುರುಷ ಮತ್ತು ಸಮಾಜಗಳೆರಡರಿಂದಲೂ ದಮನಿತಳೇ ಎನ್ನುವುದನ್ನು ಮನ್ನೂ ಭಂಡಾರಿಯವರ ಕಾದಂಬರಿಗಳು ಚಿತ್ರಿಸುತ್ತವೆ. ಸಾಮಾಜಿಕ ಧೋರಣೆಗಳೂ ಸಮಷ್ಟಿ ಮತ್ತು ವ್ಯಕ್ತಿಯ ನಡುವಿನ ಸಂಬಂಧಗಳೂ ಬದಲಾಗುವಂತೆ ಮಾಡುವ ರೀತಿಯಲ್ಲಿ ಸ್ತ್ರೀ-ಪುರುಷರ ಸಂಬಂಧಗಳು ಪುನಾರಚನೆಗೊಳ್ಳಬೇಕು ಎನ್ನುವುದು ಮನ್ನೂ ಭಂಡಾರಿಯವರು ಸೂಚಿಸುವ ಸ್ತ್ರೀ ವಿಮೋಚನೆಯ ತಾತ್ತ್ವಿಕ ತಳಹದಿಯಾಗುತ್ತದೆ.

ಒಟ್ಟಾರೆಯಾಗಿ ಮನ್ನೂ ಭಂಡಾರಿ ಗುರುತಿಸುವ ಮಹಿಳೆಯರ ಒಳತೋಟಿಗಳನ್ನು ಹೀಗೆ ಗುರುತಿಸಬಹುದು:

1) ಸ್ತ್ರೀಯರ ಪರಂಪರಾಗತ ಅಸ್ಮಿತೆಗಳ ಒಳಗಿನ ಒಳತೋಟಿಗಳು (ತಾಯಿ, ಪತ್ನಿ, ಮಗಳು ಇತ್ಯಾದಿ).
2) ಸ್ತ್ರೀಯರಿಗೂ ಪುರುಷರಿಗೂ ಒದಗಿಸಲಾಗುವ ಸಾಂಪ್ರದಾಯಿಕ ಶಿಕ್ಷಣಕ್ರಮ ಸೃಷ್ಟಿಸುವ ಅಂತರಗಳು.
3) ಭಾರತೀಯ ಪಿತೃಸಂಸ್ಕೃತಿ ಮಹಿಳೆಯರ ಸಾಮಾಜಿಕ ಅಸ್ತಿತ್ವದ ಮೇಲೆ ಹೊಂದಿರುವ ನಿಯಂತ್ರಣದ ಕಪಿಮುಷ್ಟಿ.
4) ಸ್ತ್ರೀ-ಪುರುಷರಿಬ್ಬರನ್ನೂ ತಪ್ಪಾಗಿ ಬೆಳೆಸುತ್ತಿರುವ ಲಿಂಗತ್ವ ವ್ಯವಸ್ಥೆ.

ಈ ವಿವಿಧ ಮೂಲಗಳಿಂದ ಹುಟ್ಟುವ ಸಮಸ್ಯೆಗಳಿಗೆ ಭಾರತದಲ್ಲಿ ಮಹಿಳೆಯರು ತೋರುತ್ತಿರುವ ಪ್ರತಿಕ್ರಿಯೆಗಳನ್ನು ಪರಿಶೀಲಿಸುವ ಮನ್ನೂ ಭಂಡಾರಿ ಸ್ವತಂತ್ರ ವ್ಯಕ್ತಿಯ ಅಸ್ತಿತ್ವ ಹಾಗೂ ಸಮಾಜಗಳ ತಿರುವಿನ ಬಿಂದುವಿನಲ್ಲಿ ನಿಂತು ಎತ್ತ ಹೋಗಲೂ ತಿಳಿಯದೆ ಒದ್ದಾಡುತ್ತಿರುವಂಥ ಮಹಿಳೆಯರ ಸ್ಥಿತಿಯನ್ನು ಚಿತ್ರಿಸುತ್ತಾರೆ.

**ಆಶಾಪೂರ್ಣದೇವಿ**

ಮಹಿಳೆಯರ ಶೋಷಣೆಯಲ್ಲಿ ಗಂಡಸರಷ್ಟೇ ಹೆಂಗಸರೂ ನಿಷ್ಣಾತರು ಎಂಬುದು ಆಶಾಪೂರ್ಣದೇವಿಯವರ ಖಚಿತವಾದ ದೃಷ್ಟಿ. ಇತರ ಮಹಿಳೆಯರನ್ನು ಶೋಷಿಸುವ ಮಹಿಳೆಯರ ವಿರುದ್ಧವಾದ ಕಟುಟೀಕೆ ಅವರ ಕೃತಿಗಳ ಕೇಂದ್ರವಾಗುತ್ತದೆ. ಅವಲಂಬಿತರು, ಅಭದ್ರರು, ವೃದ್ಧೆಯರು, ತಾಯಂದಿರು, ಅತ್ತೆಯಂದಿರು ಮುಂತಾದವರು ಶೋಷಿತರ ದೊಡ್ಡ ಪರಂಪರೆಗೆ ಇಲ್ಲಿ ಸೇರುತ್ತಾರೆ.



ಪ್ರಥಮ ಪ್ರತಿಶ್ರುತಿ, ಸುವರ್ಣಲತಾ, ಬಕುಲಕಥಾ ಎಂಬ ಇವರ ತ್ರಿವಳಿ ಕಾದಂಬರಿಗಳಲ್ಲಿ ವಸಾಹತುಕಾಲದಿಂದ ಹಿಡಿದು ವಸಾಹತೋತ್ತರ ಕಾಲದವರೆಗಿನ ಮಹಿಳಾಚಳವಳಿಯ ಬೆಳವಣಿಗೆಯನ್ನು ಗುರುತಿಸಬಹುದು.

ವಿದ್ಯಾವಂತರಾಗಿ ಆರ್ಥಿಕ ಸ್ವಾತಂತ್ರ್ಯ ಪಡೆದ ಆಧುನಿಕ ಮಹಿಳೆಯರು ಹಿಂದಿನ ಪೀಳಿಗೆಯ ಮಹಿಳೆಯರಿಗಿಂತ ಹೆಚ್ಚು ಸ್ವಕೇಂದ್ರಿತರೂ ಸ್ವಾರ್ಥಿಗಳೂ ಆಗಿರುತ್ತಾರೆಂದು ಗುರುತಿಸುವ ಆಶಾಪೂರ್ಣದೇವಿ ಈ ಮಹಿಳೆಯರು ಸಾಮಾಜಿಕ ಮೌಲ್ಯಗಳನ್ನು ಗ್ರಹಿಸುವ ಕ್ರಮವೇ ತಪ್ಪಾದದ್ದು ಎಂದು ಸೂಚಿಸುತ್ತಾರೆ. ವೈಯಕ್ತಿಕ ಸಂತೋಷಗಳ ಹುಡುಕಾಟದಲ್ಲಿ ಸಾಮಾಜಿಕ ಜವಾಬ್ದಾರಿಗಳು ಹಿಂದೆ ಸರಿದಿವೆ. ನವೀನವಾಗಿ ಗಳಿಸಿಕೊಂಡ ಸ್ವಾತಂತ್ರ್ಯವೂ ಅವರನ್ನು ಇತರ ಮಹಿಳೆಯರ ಹತ್ತಿರ ಕರೆತಂದಿಲ್ಲ. ಮಹಿಳೆಯರ ನಡುವಿನ ಈ ಐಕ್ಯತೆಯ ಕೊರತೆಯಿಂದ ಅವರು ಯಾವುದನ್ನೂ ಒಳಗೊಳ್ಳಲಾರದೆ ಇತರ ಮಹಿಳೆಯರ ಸಮಸ್ಯೆಗಳಿಗೆ ಜಡರಾಗಿ ಉಳಿಯುವಂತಾಗಿದೆ ಎನ್ನುವುದು ಆಶಾಪೂರ್ಣದೇವಿಯವರ ವಿಶ್ಲೇಷಣೆಯ ಸಾರ.

'ಬಕುಲ್‌ಕಥಾ' ಕಾದಂಬರಿಯ ನಾಯಕಿ ಬಕುಲಾ ಒಬ್ಬ ಸ್ತ್ರೀವಾದಿ ಲೇಖಕಿ. ಮಹಿಳೆಯಾಗಿ ಒಂದು ಮಗ್ಗುಲಲ್ಲಿ ನಿಂತು ತನ್ನನ್ನೂ ಇತರ ಮಹಿಳೆಯರನ್ನೂ ಆವರಿಸಿರುವಂಥ ಸಮಸ್ಯೆಗಳನ್ನು ನಿರ್ವಿಕಾರವಾಗಿ ವಸ್ತುನಿಷ್ಠೆಯಿಂದ ವಿಶ್ಲೇಷಿಸಬಲ್ಲವಳು. ಸಾಮಾಜಿಕ ಗೋಜಲುಗಳಿಗೆ ಬೇಸತ್ತು, ಗಂಡ ಬಿಟ್ಟಿದ್ದರಿಂದ ಆಸರೆ ಹುಡುಕುತ್ತ ಬರುವ ನಮಿತಾಗೆ ನೆರವು ನೀಡಲು ಈಕೆ ಸಿದ್ಧಳಿಲ್ಲ. ಹೀಗೆ ಹೆಣ್ತನದ ಸಾಂಪ್ರದಾಯಿಕ ಲಕ್ಷಣಕ್ಕೆ ಮಹಿಳೆ ಎರವಾಗಿರುವುದನ್ನು ಗುರುತಿಸುವ ಆಶಾಪೂರ್ಣದೇವಿ ಸಾಂಪ್ರದಾಯಿಕ ಸಾಮಾಜಿಕ ಜೀವನದ ಬದಲಾವಣೆ, ಸುಧಾರಣೆಯನ್ನು ಆಶಿಸುತ್ತಾರೆ.

ಅವರ ಕಲ್ಪನೆಯ ಸಾಮಾಜಿಕ ಯುಟೋಪಿಯಾದಲ್ಲಿ ಸ್ತ್ರೀಯರು, ಪುರುಷರು, ಹಿರಿಯರು, ಕಿರಿಯರು ಒಬ್ಬರಿಗೊಬ್ಬರು ಅಧೀನರಾಗಿರದೆ, ಸಮಾನ ಹಕ್ಕುಗಳಿರುವ, ಮಾನವೀಯ ಮೌಲ್ಯಗಳಿಗೆ ಬೆಲೆ ಕೊಡುವವರಾಗಿರುತ್ತಾರೆ. ಮಹಿಳೆಯರು ತಮ್ಮೊಳಗೆ ಬೇರೂರಿರುವ ಮಾನಸಿಕ ದಿಗ್ಬಂಧನದ ಗೋಡೆಗಳನ್ನು ಮುರಿದು ಹೊರಬರಬೇಕು, ಪಿತೃಪ್ರಧಾನ ಕುಟುಂಬವ್ಯವಸ್ಥೆಯ ಹೊರಗೋಡೆಗಳನ್ನಷ್ಟೇ ಒಡೆದರೆ ಸಾಲದು ಎನ್ನುವುದು ಆಶಾಪೂರ್ಣ ದೇವಿಯವರ ನಿಲುವು. ಖಾಸಗಿ–ಸಾರ್ವಜನಿಕ, ವೈಯಕ್ತಿಕ–ಸಾಮಾಜಿಕ, ಒಳಗಿನದು–ಹೊರಗಿನದು ಎಂಬ ದ್ವಂದ್ವದಾಟಗಳು ಆಕೆಗೆ ಅಷ್ಟು ಮುಖ್ಯವಲ್ಲ. ಇವೆಲ್ಲ ಪರಸ್ಪರ ಸಾಪೇಕ್ಷವಾಗಿರುವ ಪರಿಕಲ್ಪನೆಗಳು. ಆದ್ದರಿಂದ ವೈಯಕ್ತಿಕತೆಗಾಗಿ ಸಾಮಾಜಿಕವಾದದ್ದನ್ನು ಬಲಿಗೊಡುವುದು ಅರ್ಥಹೀನ ಎಂಬುದಕ್ಕೆ ಆಕೆ ಒತ್ತುಕೊಡುತ್ತಾರೆ. ಸಮಷ್ಟಿಯ ಆತ್ಮದೊಂದಿಗೆ ಸಂಬಂಧವನ್ನು ಕಾಯ್ದುಕೊಳ್ಳುವ ಮೂಲಕ ವ್ಯಕ್ತಿಕೂಡ ತನ್ನ ಅಪೂರ್ಣತೆ, ನೋವು, ಪರಕೀಯತೆಗಳಿಂದ ಮುಕ್ತಿ ಪಡೆಯಲು ಸಾಧ್ಯ ಎನ್ನುವುದು ಆಶಾಪೂರ್ಣದೇವಿ ಪ್ರತಿಪಾದಿಸುವ ಜೀವನ ದರ್ಶನ.

**ಇಸ್ಮತ್ ಚುಗ್ತಾಯಿ ಮತ್ತು ಕುಂದಣಿಕಾ ಕಪಾಡಿಯಾ**



ಈ ಇಬ್ಬರು ಲೇಖಕಿಯರು ಶ್ರೇಣೀಕೃತ ಜಾತಿವ್ಯವಸ್ಥೆ ಮತ್ತು ಲಿಂಗತ್ವ ವ್ಯವಸ್ಥೆಯ ತಾತ್ತ್ವಿಕತೆಗಳನ್ನು ನಿರಾಕರಿಸುವಂಥ ಸಮುದಾಯಗಳಿಂದ ಬಂದವರು. ಇಸ್ಮತ್‌ಚುಗ್ತಾಯಿ ಮುಸ್ಲಿಂ ಸಮುದಾಯದ ಹಿನ್ನೆಲೆಯಿಂದ ವಿಭಿನ್ನ ಅನುಭವವನ್ನು ಸೃಷ್ಟಿಸಿದರೆ, ಕುಂದಣಿಕಾ ಕಪಾಡಿಯಾ ಸ್ತ್ರೀ–ಪುರುಷರಿಬ್ಬರೂ ಸೇರಿ ಕಟ್ಟುವಂಥ, ಪೋಷಿಸುವಂಥ, ಪರಸ್ಪರ ಅವಲಂಬಿತವಾದ ದ್ವಿಲಿಂಗತ್ವವುಳ್ಳ ಅಸ್ಮಿತೆಗಳಿರುವ ಮತ್ತು ಸ್ತ್ರೀಪುರುಷರಿಬ್ಬರನ್ನೂ ಪರಿಪೂರ್ಣತೆಗೆ ಒಯ್ಯಬಲ್ಲ ಸಮಾಜವೊಂದರ ದರ್ಶನಕ್ಕೆ ಯತ್ನಿಸುತ್ತಾರೆ.

ಈ ಲೇಖಕಿಯರ ಸ್ತ್ರೀಪಾತ್ರಗಳು ಪುರುಷರ ವಿರುದ್ಧವಾಗಿ ಸ್ವಾತಂತ್ರ್ಯಕ್ಕೆ ಪ್ರವೇಶಿಸುವುದಿಲ್ಲ. ಸ್ತ್ರೀಯರಲ್ಲೂ ಪುರುಷರಲ್ಲೂ ಅಂತರ್ಗತವಾಗಿರುವ ಪಿತೃಪ್ರಧಾನ ಧೋರಣೆಗಳಿಂದ ಇಬ್ಬರೂ ಬಿಡುಗಡೆ ಪಡೆಯಬೇಕಾದ ಸ್ವಾತಂತ್ರ್ಯಕ್ಕೆ ಇವರ ಹಂಬಲ. ಹಕ್ಕೊತ್ತಾಯಗಳಾವುದೂ ಇಲ್ಲದ ಸ್ತ್ರೀ–ಪುರುಷ ಸಂಬಂಧಗಳು ಮಾತ್ರವೇ ಪಿತೃಸಂಸ್ಕೃತಿ ಸ್ತ್ರೀಯರ ಮೇಲೆ ಹೇರಿರುವ ದಾಸ್ಯ ಭಾವದಿಂದ ಅವರನ್ನು ಬಿಡುಗಡೆ ಮಾಡಬಲ್ಲವು, ಇಂತಹ ವಿಮುಕ್ತ ಸಮಾಜದಲ್ಲಿ ವ್ಯಕ್ತಿಗಳು ಸಾರ್ಥಕತೆಯತ್ತ ಸಾಗುವಂಥ ಬದುಕನ್ನು ಬದುಕಲು ಸಾಧ್ಯ.

ಚುಗ್ತಾಯಿ ಚಿತ್ರಿಸುವ / ಸೂಚಿಸುವ ಸ್ತ್ರೀವಿಮೋಚನೆಯ ಮಾದರಿಯಲ್ಲಿ ಮಹಿಳೆಯರು ಸಾಂಪ್ರದಾಯಿಕ ಸಮಾಜಗಳಿಂದ ತಮ್ಮನ್ನು ತಾವೇ ಪ್ರತ್ಯೇಕಿಸಿಕೊಂಡು ಒಂದು ಸ್ತ್ರೀವಾದಿ ಯುಟೋಪಿಯಾಕ್ಕೆ ಪಲಾಯನ ಮಾಡುತ್ತಾರೆ. ದಮನಿತ ವ್ಯಕ್ತಿಗಳಾಗಿದ್ದರೂ ಈ ಮಹಿಳೆಯರು ತಮ್ಮದೇ ಆದ ಅಸ್ಮಿತೆ, ಆನಂದಗಳನ್ನೂ ಕಂಡುಕೊಂಡಿರುತ್ತಾರೆ. ಚುಗ್ತಾಯಿ ಸೂಚಿಸುವಂಥ ಈ ಮಾದರಿ ಪಿತೃಸಂಸ್ಕೃತಿಯ ಸಂರಚನೆಯಲ್ಲಿ ಬದಲಾವಣೆಯನ್ನು ಮಾಡಬೇಕೆಂಬುದಲ್ಲ. ವ್ಯಕ್ತಿಯಾಗುವುದು ಮತ್ತು ಸ್ತ್ರೀವಾದಿ ಯುಟೋಪಿಯದ ಪ್ರಜೆಯಾಗುವುದು ಎರಡೂ ಸಹಜವೆನಿಸುವ ಸಮಾಜದೊಳಗೆ ಸಾಮಾಜಿಕತೆ, ವೈಯಕ್ತಿಕತೆಗಳ ಹದವಾದ ಸಂಯೋಜನೆಯನ್ನೂ ಇಲ್ಲಿ ಕಾಣಲಾಗುವುದಿಲ್ಲ.

ಕುಂದಣಿಕಾ ಕಪಾಡಿಯಾ ಅವರ ಕಾದಂಬರಿ 'Seven steps is the sky' ಸಾಂಪ್ರದಾಯಿಕ ಸಮಾಜ ಯಾರನ್ನು ಹೊಂದದವರೆಂದು ಭಾವಿಸುತ್ತದೋ ಅಂತಹ ಮಹಿಳಾ ಪಾತ್ರಗಳನ್ನು ಸೃಷ್ಟಿಸುವ ಪ್ರಖರವಾದ ಸ್ತ್ರೀವಾದಿಸತ್ವವನ್ನು ಒಳಗೊಂಡ ಕಾದಂಬರಿಯಾಗಿದೆ. ಈ misfits ಎನಿಸಿಕೊಳ್ಳುವ ಮಹಿಳೆಯರು ಮೌಲ್ಯಗಳ ಮೌಲಿಕತೆಯನ್ನೇ ಪ್ರಶ್ನಿಸುವವರು. ಪಿತೃಸಂಸ್ಕೃತಿಯ ವಿನಾಶಕಾರಿ ನಿಯಮಗಳನ್ನು ಬದಲಾಯಿಸಲು ಇವರು ನಡೆಸುವ ಹೋರಾಟ ಕೊನೆಯಲ್ಲಿ ಆ ಸಮಾಜದ ಸಾಂಪ್ರದಾಯಿಕ ಶಕ್ತಿಗಳಿಗೇ ಅಧೀನರಾಗುವಂತೆ ಪರಿಣಮಿಸುತ್ತದೆ. ತಾವು ಹೀಗೆ ವ್ಯವಸ್ಥೆಗೇ ಬಲಿಯಾಗುವುದನ್ನು



ತಪ್ಪಿಸಲು, ಅದನ್ನು ನಿರಾಕರಿಸಲು ವ್ಯವಸ್ಥೆಗೆ ಪರಕೀಯರಾಗುವ ಮಹಿಳೆಯರೆಲ್ಲ ಸೇರಿ ತಮ್ಮದೇ ಸಮುದಾಯವೊಂದನ್ನು ಕಟ್ಟಿಕೊಳ್ಳುತ್ತಾರೆ. 'ಆನಂದಾಶ್ರಮ' ಎಂಬ ಈ ಸಮುದಾಯವು ಸ್ವಾತಂತ್ರ್ಯ, ಸಮಾನತೆ, ಅಭಿವೃದ್ಧಿ, ಪಾರಸ್ಪರಿಕ ಅವಲಂಬನೆ, ಸಬಲೀಕರಣಗಳೆಲ್ಲವೂ ಸಾಧ್ಯವಾಗಿರುವ ಕನಸಿನ ಸ್ವರ್ಗ.

ಪಿತೃಪ್ರಧಾನ ಜಗತ್ತಿನ ಸಾಮಾಜಿಕ ದಿಗ್ಬಂಧನಗಳನ್ನು ಬದಲಾಯಿಸಲು ಇದರಿಂದ ಪೂರ್ತಿ ಹೊರಗೆ ಹೋಗದೆಯೂ ಕ್ರಾಂತಿಕಾರಕವಾದ ಪುನರ್‌ರಚನೆ ಸಾಧ್ಯವಿರುವ ಸಮಾಜವೊಂದನ್ನು ಕಟ್ಟಲು ಸಾಧ್ಯವೆಂದು ಕಪಾಡಿಯಾ ತೋರಿಸಲೆತ್ನಿಸುತ್ತಾರೆ. ಬಹಿಷ್ಕೃತರ ಅಥವಾ ಹೊರಗಿಡಲಾದವರ ಈ ಸಮಾಜವು ಒಂದು ವಿಸ್ತೃತ ಕುಟುಂಬದ ರೀತಿಯದು. ಇದು ಸ್ತ್ರೀ ಪುರುಷರಿಬ್ಬರನ್ನೂ ವಿಮೋಚನೆಗೊಳಿಸಬಲ್ಲ ಹೋರಾಟಗಾರರ ಒಂದು ಸೈನ್ಯವಾಗಿದೆ. ಆನಂದಾಶ್ರಮದಲ್ಲಿ ಮಹಿಳೆಯರಿಗೆ ದುಡಿದು ಗಳಿಸುವುದರ ಜೊತೆಗೆ ಗುಣಾತ್ಮಕ ಅರ್ಹತೆಯನ್ನು ಗಳಿಸಲೂ ಅವಕಾಶವಿದೆ. ಪ್ರತಿಯೊಬ್ಬರಿಗೂ ಅವರದೇ ಆದ ಕೋಣೆಗಳು/ಮನೆಗಳು ಇವೆ. ಅವರೇನೂ ಒಂದು ದೊಡ್ಡ ಹಜಾರದಲ್ಲಿ ಬದುಕುವವರಲ್ಲ. ಆದರೆ ಇವರ ಜೀವನ ವ್ಯವಸ್ಥೆ ಸ್ನೇಹದಮೇಲೆ ಕಟ್ಟಿರುವಂಥದು. ಮಾನವೀಯವಾಗಿ ಹಂಚಿಕೊಳ್ಳಲು ಸಾಧ್ಯವಿರುವಂಥದನ್ನು ಹಂಚಿಕೊಳ್ಳುವ ವ್ಯವಸ್ಥೆ ಇದು. ಎಲ್ಲಕ್ಕಿಂತ ಮಿಗಿಲಾಗಿ ವೈಯಕ್ತಿಕ ಸ್ವಾತಂತ್ರ್ಯಕ್ಕೂ ಸಾಮಾಜಿಕ ಜೀವನಕ್ಕೂ ಪರಸ್ಪರ ವಿರೋಧವಿಲ್ಲ, ಪರಸ್ಪರ ಬೆಂಬಲಿಸುವ ಸಾಪೇಕ್ಷ ಅವಲಂಬನೆಯುಳ್ಳದ್ದು. ಎಲ್ಲಾ ಸದಸ್ಯರೂ ಸಮಾನರು. ಆದರೆ ಅಸಮಾನತೆಯ ವಾಸ್ತವತೆಗೆ ಕುರುಡರಲ್ಲ, ಒಬ್ಬರಲ್ಲಿರುವ ಏನೋ ವಿಶೇಷತೆ, ಕೌಶಲ್ಯ, ಸಾಮರ್ಥ್ಯ ಇನ್ನೊಬ್ಬರಲ್ಲಿ ಇಲ್ಲದಿರಬಹುದು. ಪರಸ್ಪರರ ಸಂಬಂಧವು ಪೂರಕತ್ವ ಹಾಗೂ ಸ್ವೀಕೃತಿಗಳ ನಿಯಮಕ್ಕೆ ಬದ್ಧವಾದದ್ದು. ಪ್ರತಿಯೊಬ್ಬರೂ ಇನ್ನೊಬ್ಬರ ನಡವಳಿಕೆ ಸ್ವರೂಪಗಳಿಂದ ಏನನ್ನಾದರೂ ಕಂಡು, ಸ್ವೀಕರಿಸಲು ಅಥವಾ ಗುರುತಿಸಲು, ಬೆಂಬಲಿಸಲು ಅರ್ಹರಿರುತ್ತಾರೆ. ಪ್ರತಿಭೆ, ಸಾಮರ್ಥ್ಯಗಳ ನಿರ್ದಿಷ್ಟ ಅವಶ್ಯಕತೆಗಳಿಂದಾಗಿ ಅವರ ವ್ಯತ್ಯಾಸಗಳು ಪರಸ್ಪರರಿಂದ ದೂರಮಾಡುವ ಬದಲು ಅವರನ್ನು ಒಗ್ಗೂಡಿಸಲು ಬಳಸಿಕೊಳ್ಳಬಹುದಾದ ಯುಟೋಪಿಯಾ ಇದು.

**ಅಂಬಾಯಿ ಮತ್ತು ವೈದೇಹಿ**



ಸ್ತ್ರೀ ವಿಮೋಚನಾವಾದಿ ಚಳವಳಿಯು ಮಹಿಳೆಯರ ಸಾಂಪ್ರದಾಯಿಕವಾದ ಸ್ವೀಕೃತ ಮಾದರಿಗಳು ಯಾಜಮಾನ್ಯ ಸಂಕಥನಗಳಿಂದಲೂ ಸಾಮಾಜಿಕ ಆಚರಣೆಗಳ ಮೂಲಕವೂ ಪುನರುತ್ಪಾದಿತವಾಗುವುದರ ವಿರುದ್ಧ ಇಮ್ಮುಖವಾದ ಹೋರಾಟವನ್ನು ನಡೆಸುತ್ತ ಬಂದಿದೆ. ಈ ರೀತಿಯ ಮಾದರಿಗಳೇ ಸಾಹಿತ್ಯದಲ್ಲಿ ಮತ್ತೆ ಮತ್ತೆ ಪ್ರತಿನಿಧೀಕರಣಗೊಳ್ಳುವುದಕ್ಕೆ ವಿರುದ್ಧವಾಗಿ ಹೊಸಮಾದರಿಗಳ ಪ್ರತಿನಿಧೀಕರಣದ ಮೂಲಕ ಈ ಗತಾನುಗತಿಕ ಮಾದರಿಗಳಿಗೆ ಆತಂಕ ಒಡ್ಡುವ, ಅವನ್ನು ಮುರಿಯುವ ಮೂಲಕ ಅವುಗಳೇ ನಿಜವಾದ ಮಾದರಿಗಳಲ್ಲ ಎಂದು ತೋರಿಸಲೂ ಈ ಚಳವಳಿ ಯತ್ನಿಸುತ್ತದೆ.

ಮಹಿಳೆಯರು ಪಿತೃಸಂಸ್ಕೃತಿಯ ಕಪಿಮುಷ್ಟಿಯಿಂದ ದೂರವಾಗಲು ತಾವೇ ಅದರಿಂದ ದೂರ ಸರಿದು ತಮ್ಮ ಅಸ್ತಿತ್ವದ ಶೋಧದಲ್ಲಿ ತೊಡಗುತ್ತಿರುವುದೂ ಒಂದು ಪ್ರತಿಭಟನೆಯ ದಾರಿಯಾಗಿದೆ. ಅಂಬಾಯಿ ಮತ್ತು ವೈದೇಹಿ ಇಬ್ಬರೂ ಪಿತೃಪ್ರಧಾನ ಸಮಾಜವನ್ನು ಮಹಿಳೆಯ ದೃಷ್ಟಿಕೋನದಿಂದ ಚಿತ್ರಿಸುತ್ತಾರೆ. ಈ ಚಿತ್ರವು ಅಸ್ಪಷ್ಟವಾಗಿ ಗೊಂಚಲು ಗೊಂಚಲಾಗಿ ನೇಯ್ದುಕೊಂಡಿರುವಂಥದು. ಈ ವಿನಾಶಕಾರಿ ವ್ಯವಸ್ಥೆಯ ಅಂಚಿನ ನೆಲೆಯಲ್ಲಿ ಮಹಿಳೆಯರು ಅಸ್ತಿತ್ವ ಪಡೆದಿದ್ದು ಅವರ ಇರುವಿಕೆ ಹೆಚ್ಚು ಕಡಿಮೆ ಬಹಿಷ್ಕೃತರ ತರಹದ್ದೇ ಆಗಿದೆ. ವ್ಯಂಗ್ಯವೆಂದರೆ ಪಿತೃಪ್ರಧಾನ ಸಮಾಜವು ಅವರಿಗೆ ತಾವು



ಬಯಸಿದ ಹಾಗೆ ಸ್ವಾಭಿವ್ಯಕ್ತಿಗೆ ಯಾವುದೇ ಅವಕಾಶ ಕೊಟ್ಟಿರದಿದ್ದರೂ ಅವರಿರುವ ಅಂಚಿಗೆ ಒತ್ತರಿಸಿದ ಜಾಗಗಳೇ ತಮ್ಮ ನಿಜವಾದ ಸತ್ವವನ್ನು ಸಮರ್ಥಿಸಿಕೊಳ್ಳಲು ಅವರಿಗೆ ಆಸ್ಪದ ನೀಡುತ್ತವೆ. ಹೀಗೆ ಅಂಚಿಗೊತ್ತರಿಸಿದ ಜಾಗಗಳು ಮಹಿಳೆಯರನ್ನು ಅವರ ಸಾಂಸ್ಕೃತಿಕ ದಿಗ್ಬಂಧನಗಳಿಂದ ಮುಕ್ತರನ್ನೇನೂ ಮಾಡಲಾರದು. ಆದರೆ ವಿಮರ್ಶೆಗೆ ಮೀರಿದಂಥ ಒಂದು ಸ್ಥಾನವನ್ನು ಕೊಡುವ ಮೂಲಕ ಮಹಿಳೆಯರ ಸ್ವಾಭಿವ್ಯಕ್ತಿಗೂ ಒಂದು ಅವಕಾಶವನ್ನು ವ್ಯವಸ್ಥೆಯೇ ತೆರೆದಿಟ್ಟಿರುತ್ತದೆ.

ಈ ಸ್ಥಾನವೇ ಒಂದು ಸಬಲೀಕರಣದ ತಾಣವೂ ಆಗಿದ್ದು ಗಂಡು–ಹೆಣ್ಣು ಎಂಬ ದ್ವಿಲೈಂಗಿಕ ಸಂಬಂಧಗಳಲ್ಲಿ ಮಾತ್ರವೇ ನೆಲೆಸಿರುವ ಒಪ್ಪಿತ ಮಾದರಿಯ ಒಳಗೆ 'ಮಹಿಳೆಯರು' ಎಂಬ ಏಕಾಕಾರದ ಮೂಲಸತ್ವವಾದಿ ಆದ ಸಮರಸದ ಪ್ರತಿನಿಧೀಕರಣವನ್ನು ಇವು ಒಡೆಯಬಲ್ಲವು. ಹೆಣ್ಣನ್ನು ಗಂಡಿನ ಸಂಬಂಧದ ಮೂಲಕ ಮಾತ್ರವೇ ನಿರ್ವಚಿಸುವ ಸಾಂಸ್ಕೃತಿಕ ನಿರ್ದೇಶನಗಳನ್ನು ಕೇವಲ ಸ್ವಾತಂತ್ರ್ಯವೆಂಬುದರಿಂದಲೇ ತಿರಸ್ಕರಿಸಲು ಸಾಧ್ಯವಾಗದು. ಆದರೆ ಅಸ್ತಿತ್ವದಲ್ಲಿರುವ ಸಾಮಾನ್ಯ ಸಂರಚನೆಗಳನ್ನು ಬದಲಾಯಿಸಲು ಯತ್ನಿಸುವಂತಹ ಸ್ವಾತಂತ್ರ್ಯವು ನಿಜವಾಗಿ ಮಹಿಳೆಯರಿಗೆ ತಮ್ಮದೇ ಒಳಗಿನ ಹಾಗೂ ಹೊರಗಿನ ದಮನಾವಸ್ಥೆಗಳಿಂದ ಹೊರಬರುವುದಕ್ಕೆ ನೆರವಾಗಬಲ್ಲದು, ಅವರು ಕಳೆದುಕೊಂಡ ಸ್ತ್ರೀನೆಲೆಗಳನ್ನು ಅವರಿಗೆ ಮತ್ತೆ ದೊರಕಿಸಿ ಕೊಡಬಲ್ಲದು.

ಸ್ವತಂತ್ರಳಾದ ಏಕಾಕಿನಿ ಮಹಿಳೆಯ ಪರಿಸ್ಥಿತಿ ಎಷ್ಟು ದುರ್ಬಲ ಹಾಗೂ ವಿನಾಶಕ್ಕೆ ಒಳಗಾದದ್ದೂ ಆಗಿರುತ್ತದೆ. ಎಂಬುದನ್ನು ಸೂಚಿಸುವ ಮೂಲಕ ಮಹಿಳೆ ಅನುಭವಿಸುವ ಅನಿರ್ಬಂಧಿತ ಸ್ವಾತಂತ್ರ್ಯ ಎಂಬುದು ಸಾಮಾಜಿಕ ವ್ಯವಸ್ಥೆಯಿಂದ ಮತ್ತು ಅದರ ಸಂಕಥನಗಳಿಂದ ಪ್ರತ್ಯೇಕಗೊಂಡದ್ದಾಗಿದ್ದರೆ ಆ ಸ್ವಾತಂತ್ರ್ಯದ ಅನುಭವವೂ ರಚನಾತ್ಮಕವಾಗಿ ಉಳಿದಿರಲಾರದು. ಅಂಥ ಸ್ವಾತಂತ್ರ್ಯ ಪಿತೃಪ್ರಧಾನ ವ್ಯವಸ್ಥೆಯ ಕ್ರಮವನ್ನು ಬುಡಮೇಲು ಮಾಡುವ ಸಾಧ್ಯತೆಯಲ್ಲೂ, ಜೆಂಡರ್ ವ್ಯವಸ್ಥೆಯ ಪರಿವರ್ತನೆಯ ಸಾಧ್ಯತೆಯಲ್ಲೂ ಮುನ್ನೋಟ ಒದಗಿಸಲಾರದೆ ಸೋಲುತ್ತದೆ.

'ಶಂಕುತಲೆಯೊಡನೆ ಒಂದು ಅಪರಾಹ್ನ' ಮತ್ತು 'ಸೌಗಂಧಿಯ ಸ್ವಗತಗಳು' ಕತೆಗಳಲ್ಲಿ ವೈದೇಹಿಯವರ ಕಥಾನಾಯಕಿಯರು ಸ್ವತಂತ್ರವಾಗಿ 'ಇರುವಿಕೆ'ಯನ್ನು ತಾವೇ ಆಯ್ಕೆಮಾಡಿಕೊಳ್ಳುವವರು, ಅವರ ಈ 'ಸ್ವತಂತ್ರವಾಸ'ವು ಯಾವುದೇ ಮುಖವಾಡಗಳಿಲ್ಲದ, ಯಾವುದೇ ನಿರ್ಬಂಧವಿರದ ಅಸ್ತಿತ್ವದ ಸಂಕೇತವಾಗುತ್ತದೆ. ಈ ಜಾಗಗಳಿಂದ ಅವರ ಕಥೆಗಳು ಹೊಮ್ಮುತ್ತವೆ. ಪ್ರತ್ಯೇಕಗೊಂಡ ಈ ಸ್ವತಂತ್ರವಾಸಗಳು ಕೊಡುವ ಭದ್ರತೆ, ಸಂತೃಪ್ತಿಗಳ ಅರ್ಥವೇನೆಂದು ಅವರು ಹುಡುಕತೊಡಗುತ್ತಾರೆ. ಪಿತೃಪ್ರಧಾನ ಕುಟುಂಬವು ಲಿಂಗತಾರತಮ್ಯವೇ ಮೊದಲಾದ ಅನೇಕ ದಮನಕಾರಿ ಆಚರಣೆಗಳ ನೆಲೆ, ಅದರಿಂದ ತಮ್ಮನ್ನು ಪ್ರತ್ಯೇಕಗೊಳಿಸಿಕೊಂಡು ಗಳಿಸಿದ ಸ್ವತಂತ್ರ ವಾಸ ಪ್ರೇಮವಿರುವ ಮತ್ತು

ಬಲವಂತವಿರದಂಥ ಬದುಕಿನ ನೆಲೆ. ಸೌಗಂಧಿ ಮತ್ತು ಶಂಕುತಲೆಯರು ಈ ಏಕಾಕಿತನದ ಜಾಗಗಳಿಂದ ಗಳಿಸಿಕೊಳ್ಳುವ ಅರಿವು ಪಿತೃಸಂಸ್ಕೃತಿಯ ಸಂಕೋಲೆಗಳಿಂದ ತಮ್ಮನ್ನು ಬಿಡಿಸಿಕೊಳ್ಳಲು ನೆರವಾಗುವಂಥ ಅರಿವು ಮತ್ತು ತಮ್ಮ ನಿಜವನ್ನು ಕಂಡುಕೊಳ್ಳುವ ಅರಿವೂ ಆಗಿರುತ್ತದೆ. ಅಂಬಾಯಿ ಮತ್ತು ವೈದೇಹಿ ಇಬ್ಬರ ಕಥೆಗಳಲ್ಲಿ ಕೇಂದ್ರವ್ಯಕ್ತಿಗಳಾದ ಮಹಿಳೆಯರು ಹೀಗೆ ಸ್ವಯಂ ಆರೋಪಿತ exile ಹಾಗೂ ಸಬಲೀಕರಣದ ಪ್ರಕ್ರಿಯೆಗಳನ್ನು ತಮ್ಮ ಮನೆಗಳಲ್ಲಿ ತಮ್ಮ ಮೇಲೆಯೇ ಪ್ರಯೋಗಿಸಿಕೊಳ್ಳುತ್ತಾರೆ.

**ಛಾಯಾ ದಾತಾರ್**

ಛಾಯಾ ದಾತಾರ್ In search of myself ಎಂಬ ಆತ್ಮಕಥನದಲ್ಲಿ ಬುಡಕಟ್ಟು ಜನರ ಲೋಕವೊಂದಕ್ಕೆ ಒಬ್ಬ ಸಾಮಾಜಿಕ ಕಾರ್ಯಕರ್ತೆಯಾಗಿ ಹೋಗಿ ಅವರ ಜೊತೆ ನೆಲೆಸಿ, ರೈತ ಮಹಿಳಾಕಾರ್ಮಿಕರ ಸಂಘಟಿತ ಚಟುವಟಿಕೆಗಳಲ್ಲಿ ಪಾಲ್ಗೊಂಡ ತಮ್ಮ ಅನುಭವವನ್ನು ದಾಖಲುಗೊಳಿಸುತ್ತಾರೆ. ಬುಡಕಟ್ಟು ಜನರ ಪ್ರಪಂಚದಲ್ಲಿ ಇರುವವರೆಗೆ ತಮ್ಮ ಸ್ವಂತ ಕೌಟುಂಬಿಕ ಸಮಸ್ಯೆಗಳಿಂದ ತಾತ್ಕಾಲಿಕವಾಗಿ ದೂರವಾಗಿದ್ದ ಸ್ಥಿತಿಯಲ್ಲಿ ಅವರ್ಣನೀಯ ಆನಂದವನ್ನು ಆಕೆ ಅನುಭವಿಸುತ್ತಾರೆ. ತನ್ನ ಆತ್ಮದೊಂದಿಗೆ ಸಂಪರ್ಕ ಪಡೆದದ್ದರಿಂದ ಉಂಟಾದಂಥ ತೃಪ್ತಿ ಅದು. ಬುಡಕಟ್ಟು ಜನರ ವಸತಿಯ ಭೂದೃಶ್ಯಾವಳಿ ಆಕೆಯನ್ನು ಎಲ್ಲ ಸಾಮಾಜಿಕ ಭೀತಿಗಳಿಂದಲೂ ಅನಿಶ್ಚಿತತೆಗಳಿಂದಲೂ ಬಿಡುಗಡೆ ಮಾಡುತ್ತದೆ. ತಾನು ಹೊಸದಾಗಿ ಗಳಿಸಿಕೊಂಡ ಚೈತನ್ಯ ಕಾವ್ಯಸೃಷ್ಟಿಸುವಂಥ ನಾಟಕೀಯ ತೀವ್ರತೆಯುಳ್ಳ ಸೃಜನಶೀಲ ಚೈತನ್ಯವಾಗಿದ್ದುದನ್ನು ಆಕೆ ವಿವರಿಸುತ್ತಾರೆ.

ದಾತಾರ್ ಅವರ ದೃಷ್ಟಿಯಲ್ಲಿ ಮಹಿಳೆಯರ ಸಾಮೂಹಿಕ ಐಕ್ಯತೆ ಅನನ್ಯವೂ ಖಾಸಗಿಯದೂ ಆಗಿರುವ ಅನುಭವವನ್ನು ಬೆಳೆಯಗೊಡದಂತೆ ತಡೆಯ ಬಹುದಾದದ್ದು. ಸಾಮೂಹಿಕವಾಗಿ ಧ್ವನಿ ಎತ್ತುವ ಕಾರ್ಯಕರ್ತೆಯ ನೆಲೆ ಒಂದು ಅಧಿಕಾರವನ್ನು ಕೊಡಬಲ್ಲದು. ಮಹಿಳೆಯರು ತಾವೆ ಒಂದು ಸಮುದಾಯವಾದಾಗ ಪ್ರತಿಯೊಬ್ಬ ಮಹಿಳೆಯಲ್ಲೂ ಆ ಅನನ್ಯತೆಯ ಅಂಕಿತವು ಅಧಿಕೃತವಾಗಿ ಹಕ್ಕೊತ್ತಾಯಿಸಲು ನೆರವಾಗಬಲ್ಲದು. ಪಿತೃಸಂಸ್ಕೃತಿಯ ಸಮಾಜದಲ್ಲಿ ಅವಳಿಗೆ ನಿರಾಕೃತವಾದಂಥ ಸ್ವಾತಂತ್ರ್ಯವನ್ನು ಆಕೆ ಅಲ್ಲಿ ಪಡೆಯಬಹುದು.

**ಪೊಪಟ್ ಹೀರಾ ನಂದಿನಿ**

ಲಿಂಗತ್ವ ಎನ್ನುವುದು ಮಹಿಳೆಯು ಅಂತಸ್ಥವಾಗಿಸಿಕೊಂಡು ನೈಸರ್ಗಿಕ ಗೊಳಿಸಿಕೊಂಡಿರುವ ಪರಿಸ್ಥಿತಿಯಾಗಿದ್ದು ಅದಕ್ಕೆ ಮುಖಾಮುಖಿಯಾಗುವ ಮೂಲಕ ಮಹಿಳೆಯರ ಸ್ಥಾನಮಾನದ ಬಗ್ಗೆ ಪಿತೃಸಂಸ್ಕೃತಿ ಕೆತ್ತಿರುವ ಶಾಸನಗಳನ್ನು ಬುಡಮೇಲಾಗಿಸಲು ಈ ಲೇಖಕಿ ಯತ್ನಿಸುತ್ತಾರೆ. ತನ್ನ ವ್ಯಕ್ತಿತ್ವವನ್ನು, ಸಾಂಸ್ಕೃತಿಕ ಅನುಭವಗಳನ್ನು ವಿಶ್ಲೇಷಿಸಿ ಅದನ್ನು ಪಿತೃಪ್ರಧಾನ ಸಾಮಾಜಿಕ ರಚನೆಯಾಗುವ ಹಾಗೆ ಬಹಿರಂಗ ಪಡಿಸುವುದು ಆಕೆಯ ಉದ್ದೇಶ. "Me, a woman" ಎಂಬ ತಮ್ಮ ಆತ್ಮಚರಿತ್ರೆಯಲ್ಲಿ ಹೀರಾನಂದಿನಿ ಅಧೀನತೆ ಎನ್ನುವುದು ಧರ್ಮಶಾಸ್ತ್ರದ ಕಾನೂನುಗಳಲ್ಲಾಗಲಿ, ಮಹಿಳೆಯರ ಸ್ವಭಾವದಲ್ಲೇ ಇರುವ ದೋಷದಲ್ಲಿಯಾಗಲಿ ಇಲ್ಲ, ಆದರೆ ಕುಟುಂಬಜನ್ಯವಾದ ಭೌತಿಕ ಪ್ರವೃತ್ತಿಗಳಲ್ಲೇ ಮಹಿಳೆಯರ ಪರಾಧೀನತೆ ಇದೆ ಎಂದು ಪ್ರತಿಪಾದಿಸುತ್ತಾರೆ.



ಮಹಿಳೆಯ ತಾಯ್ತನದ ನೈಸರ್ಗಿಕ ಪ್ರವೃತ್ತಿಗಳಲ್ಲಿ, ತನ್ನ ಕುಟುಂಬದಲ್ಲಿನ ಸದಸ್ಯರೊಂದಿಗೆ ಆಕೆ ಹೊಂದಿರುವ ನಂಟುಗಳಲ್ಲಿ ಗಂಡನ ವಿಷಯವಾಗಿ ಅವಳು ಹೊಂದಿರುವ ಗೌರವ ಭಾವನೆಯಲ್ಲಿ, ತನ್ನ ಮನೆಯನ್ನು ನಿರ್ವಹಿಸುವ ವಿಷಯದಲ್ಲಿ ಅವಳಲ್ಲಿ ಮೈಗೂಡಿರುವ ಸಾಮರ್ಥ್ಯದಲ್ಲಿ ಹೀಗೆ ಒಂದೊಂದು ಪ್ರವೃತ್ತಿಗಳಲ್ಲೂ ಅವಳು ಹೇಗೆ ಶೋಷಿತಳಾಗುತ್ತಾಳೆಂದರೆ ತನ್ನನ್ನು ತಾನೇ ಗಂಡಿನ ದಾಸ್ಯದಲ್ಲಿ ನಿಜವಾಗಿ ಇರಿಸಿಕೊಂಡಿರುತ್ತಾಳೆ. ಇದು ಹೀರಾನಂದಿನಿಯವರು ತಮ್ಮ ಹಾಗೂ ಸುತ್ತಮುತ್ತಲಿನ ಬದುಕನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ಮೂಲಕ ತಲುಪುವ ತಿಳಿವಳಿಕೆಯಾಗಿದೆ. ಸಂಸ್ಕೃತಿ ಕಟ್ಟಿರುವ ಕನ್ನಡಿಗೋಡೆಗಳನ್ನು ಮಹಿಳೆಯ ಈ ಅರಿವು ಒಡೆದುಹಾಕುತ್ತದೆ, ತನ್ನ ಸ್ಥಾನ ಯಾವುದೆಂಬುದನ್ನು ಅವಳಿಗೆ ಸ್ಪಷ್ಟಪಡಿಸುತ್ತದೆ. ಏಕಾಕಿ, ಸ್ವತಂತ್ರ ಮಹಿಳೆಯಾಗಿ ತನ್ನ ಅಸ್ತಿತ್ವದ ವಿರುದ್ಧವಾಗಿರುವ ಸಾಮಾಜಿಕ ವಿಮರ್ಶೆಯನ್ನು ನಿರಾಕರಿಸಲು ಆಕೆ ಯತ್ನಿಸಬೇಕು. ತನಗಾಗಿ ಒಬ್ಬ ಗಂಡಸನ್ನು ತಾನೇ ಕಂಡುಕೊಳ್ಳಲು ಆಗದೆ ಇರುವುದರಿಂದಲೇ ಹುಟ್ಟಿದಂಥ ವರದಕ್ಷಿಣೆಯ ಪದ್ಧತಿಯನ್ನು ತಾನೂ ಮುಂದುವರೆಸಲು ಅವಳಿಗೆ ಅಸಾಧ್ಯವಾಗುತ್ತದೆ. ಅಂತಿಮವಾಗಿ ಅವಳು ತನ್ನ ಅವಮಾನಗಳನ್ನು ಮೀರಲು ಸಮರ್ಥಳಾಗುತ್ತಾಳೆ. ತನ್ನ ಮೇಲೆ ಹೇರಿದಂಥ ಒತ್ತಾಯದ ಬೇಡಿಕೆಗಳನ್ನು ಆಕೆ ನಿರಾಕರಿಸಬಲ್ಲಳು. ಕೆಳಸ್ತರದಲ್ಲಿ ಬದುಕುವವಳು ಇಂಥ ಆತ್ಮನಿರೀಕ್ಷಣೆಯ ಮೂಲಕ ಮಾತನಾಡಲು ಕಲಿಯುತ್ತಾಳೆ, ಪ್ರಶ್ನೆಗಳನ್ನು ಕೇಳ ತೊಡಗುತ್ತಾಳೆ. ವ್ಯವಸ್ಥೆಗೆ ಆಕೆ ನೀಡುವ ಕಟುವಾದ ಉತ್ತರ ಇದೇ ಆಗುತ್ತದೆ.

ಛಾಯಾ ದಾತಾರ್ ಮತ್ತು ಹೀರಾನಂದಿನಿಯವರು ಕಾಣಿಸುವ ಸ್ತ್ರೀವಿಮೋಚನೆ ಮಹಿಳೆಯರ ಅನುಭವಗಳನ್ನು ಈ ವ್ಯವಸ್ಥೆಯಲ್ಲಿ ದಾಖಲುಗೊಳಿಸುವ ಮೂಲಕ ತನ್ನೊಳಗೆ ತಾನಾಗುವ ಅವಕಾಶವನ್ನು ತೆರೆಯುವ ರೀತಿಯದ್ದಾಗಿದೆ. ಇವರ ಕಥೆಗಳು ಸ್ವತಃ ಇಂತಹ ದಾಖಲಾತಿಯ ಜಾಗಗಳು. ತಮ್ಮ ಪರಾವಲಂಬಿತ್ವವನ್ನು ನಿರಾಕರಿಸಿ ತಮ್ಮನ್ನು ಕ್ರಿಯೆಗೆ ತೊಡಗಿಸಿಕೊಳ್ಳುವುದೇ ಮಹಿಳಾ ಅನುಭವಗಳಿಗೆ ಕಲ್ಪಿಸುವ ಚೌಕಟ್ಟಾಗುತ್ತದೆ. ಇವರ ಬರಹಗಳೊಳಗೆ ಸ್ವಾತಂತ್ರ್ಯ ಎಂಬುದರ ಕಲ್ಪನೆಯು ಗಾಯತ್ರಿಸ್ಪಿವಾಕ್ ಹೇಳುವ ರೀತಿಯ ಸ್ವಾತಂತ್ರ್ಯ. ಈ ಸ್ವಾತಂತ್ರ್ಯವು ಪ್ರಾಥಮಿಕವಾಗಿ ಒಂದು ಮಾನಸಿಕ ವಿದ್ಯಮಾನ. ಅದರಲ್ಲಿ ಮಹಿಳೆಯರು ಚಿಂತಿಸತೊಡಗುತ್ತಾರೆ. ಈ ವಿದ್ಯಮಾನ ಅವರ ಪ್ರಜ್ಞೆಯ ಪರಿವರ್ತನೆಗೆ ಅವರನ್ನು ಸಿದ್ಧಪಡಿಸುವಂಥದ್ದಾಗಿರುತ್ತದೆ. ತಾವು ಇರುವ ಜಾಗಗಳಲ್ಲಿಯೇ ತಮ್ಮ ಒಳಗಿನಿಂದಲೇ ಪರಂಪರಾಗತ ರೂಢಿಗಳಿಗೆ ವಿರುದ್ಧವಾಗಿ ಬಿಡುಗಡೆ ಕಂಡುಕೊಳ್ಳುವುದೇ ಇವರ ವಿಮುಕ್ತಿ. ಸ್ತ್ರೀ ವಿಮೋಚನೆಯ ಇಂತಹ ಮಾದರಿಗಳು ಸಕ್ರಿಯವಾಗಿ ತಮ್ಮದೇ ಅಸ್ಮಿತೆಗಳನ್ನು ಕಟ್ಟುತ್ತ ಹೋಗುತ್ತವೆ. ಸ್ತ್ರೀಯರು ಜಡ, ನಿಷ್ಕ್ರಿಯ ಹಾಗೂ ಸಂಪ್ರದಾಯದಲ್ಲಿ ಬೇರೂರಿದ ವಸ್ತುಗಳು ಎಂಬಂಥ ರೂಢಿಗತ ಚಿತ್ರಕ್ಕೆ ತದ್ವಿರುದ್ಧವಾದಂಥವು. ಸ್ತ್ರೀವಾದವು ಪ್ರತಿಪಾದಿಸುವ ಸಬಲೀಕರಣ, ಮತ್ತು ಸಫಲತೆಗಳು ಪಿತೃಪ್ರಧಾನ ಜ್ಞಾನಸಂರಚನೆಗಳನ್ನು ಕಳಚುವ ಮೂಲಕವೇ ಸಾಧ್ಯವಾಗಬಲ್ಲವು ಎಂಬುದನ್ನು ಸೂಚಿಸುವುದು ಈ ಎಲ್ಲ ಲೇಖಕಿಯರ ರಚನೆಗಳಿಗೂ ಸಮಾನ ಎನ್ನಬಹುದಾದ ಒಂದು ಲಕ್ಷಣ ಇತರ ಭಿನ್ನತೆಗಳ ನಡುವೆಯೂ ಇದನ್ನು ಗುರುತಿಸಲು ಸಾಧ್ಯವಿದೆ.

❑

*ಸಂಗ್ರಹಾನುವಾದ :*

***ಬಿ.ಎನ್. ಸುಮಿತ್ರಾಬಾಯಿ***

# ಸುಳ್ಳು.... ಸುಳ್ಳು

• ಥುರಯ್ಯ ಮಲ್ಹಾಸ್‌ರವರ

ಎಲ್ಲವೂ ಸುಳ್ಳು
ಸೂರ್ಯನ ಕೆಳಗೆ
ಸೂರ್ಯನ ಮೇಲೆ
ಸುತ್ತ ಮುತ್ತ
ಎಲ್ಲವೂ ಸುಳ್ಳು

ನಿನ್ನೆಯ ಬಗ್ಗೆ ಕೇಳಿದೆ
ನಾಳೆಯ ಬಗ್ಗೆ ಕೇಳಿದೆ
ಇಂದಿನದನ್ನೇ ಮರೆತೆ
ಬೆಳಗುಗಳೇ ದಣಿದವು
ನನ್ನ ಮೂಳೆಗಳೆ ಮೇಲುರುಳಿದವು

ಮಂಡಿಯೂರಿ ನನ್ನ ನೆಲದಲ್ಲೇ
ಬೇಡುತ್ತೇನೆ:
ಸುಳ್ಳು... ಸುಳ್ಳು
ಎಲ್ಲವೂ ಸುಳ್ಳೂ
ಸೂರ್ಯನ ಕೆಳಗೆ
ಸೂರ್ಯನ ಮೇಲೆ
ಸುತ್ತ ಮುತ್ತ
ಎಲ್ಲವೂ ಸುಳ್ಳು

ವರ್ತಮಾನದಲ್ಲಿ ಹುಸಿದು
ಗಾಳಿಯೊಂದಿಗೆ ಪೈಪೋಟಿಗಿಳಿದು
ಗುಡುಗಿ, ಮಿಂಚಿ
ಶಾಯಿಯ
ಅಣು ಮೂಲದಿಂದೆಳೆತಂದು
ತಿನ್ನುವುದಿಲ್ಲ
ದೂಕುವುದಿಲ್ಲ
ಮುರಿದಿದೆ ಪೆನ್ನು
ಬರಿದಾಗಿದೆ ಮಸಿ

ಕತ್ತನು ಸುತ್ತಿದೆ ಕಣ್ಣೀರು
ಬೇಡಿದೆ:
ಸುಳ್ಳು... ಸುಳ್ಳು
ಎಲ್ಲವೂ ಸುಳ್ಳು
ಸೂರ್ಯನ ಕೆಳಗೆ
ಸೂರ್ಯನ ಮೇಲೆ
ಸುತ್ತ ಮುತ್ತ
ಎಲ್ಲವೂ ಸುಳ್ಳು

ನನ್ನ ದಾರಿಗಳಲಿ ನಡೆದೆ
ಉರುಳಿದೆ
ಆಳಗಳ ಅರಸಿ
ಬಿದ್ದೆ
ಬಿದ್ದರು ಸೋದರರು ನನ್ನೊಂದಿಗೆ
ಏನಾಗಿದ್ದೆವೋ ತಿಳಿಯದು
ಎಲ್ಲಿತ್ತೋ ನಮ್ಮೆಲ್ಲರ ಅಸ್ತಿತ್ವ
ಮಾಯವೇ ಆದೆವು

ಬದುಕುವುದಾದರೂ ಏಕೆ?
ಬೇಡುವುದಾದರು ಏಕೆ?
ಪಾಪದವ ಅವ ಪಾಪದವ
ಹಾದಿಗಳಲಿ ಅರ್ಥ ಹುಡುಕುವವ!

ಸುಳ್ಳು.... ಸುಳ್ಳು
ಎಲ್ಲವೂ ಸುಳ್ಳೂ
ಸೂರ್ಯನ ಕೆಳಗೆ
ಸೂರ್ಯನ ಮೇಲೆ
ಸುತ್ತ ಮುತ್ತ
ಎಲ್ಲವೂ ಸುಳ್ಳು

*ಉರ್ದುಮೂಲ :*
"Arab women poets"
*ಕನ್ನಡಾನುವಾದ : ಎಂ.ಆರ್. ಕಮಲಾ*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018